# ಬನವಾಸಿಯ ಕೈಪಿಡಿ

೧೯೭೧

ಬೆಲೆ: ಒಂದು ರೂಪಾಯಿ

# ಮಧುಕೇಶ್ವರ ದೇವಾಲಯ



ಧುಂಡಿರಾಜ ಗಣಪತಿ
ರಾಮೇಶ್ವರ
ವರುಣ
ವೆಂಕಟ್ರಮಣ
ಶ್ರೀ ರಾಮ
ಉಮಾ ಮಹೇಶ್ವರ
ವಾಯು
ನಿರಋತಿ
ಚಿಂತಾಮಣಿ ಗಣಪತಿ
ನರಸಿಂಹ
ಕೇದಾರೇಶ್ವರ
ಯಮ
ಅಮೃತೇಶ್ವರ
ಹೂವಲ್ಲಿ ಮಧುಕೇಶ್ವರ
ವರದೇಶ್ವರ
ವಿಶ್ವೇಶ್ವರ
ವಿಠೋಬ
ಅಗ್ನಿ
ವೀರಭದ್ರ
ಕಾರ್ತಿಕೇಯ
ಶ್ರೀ. ಮಧುಕೇಶ್ವರ
ಆದಿಮಾಧವ
ಚಂಡೇಶ್ವರ
ನಂದಿ
ಇಂದ್ರ
ಜ್ಯೋತಿ ಸ್ಥಂಬ
ಧ್ವಜ ಸ್ಥಂಬ
ಶ್ರೀ. ಪಾರ್ವತಿ ದೇವಿ
ಸೂರ್ಯನಾರಾಯಣ
ಮಹಾಗಣಪತಿ
ಪರಶುರಾಮ
ಆದಿಶೇಷ
ಕೇಶವ
ಕುಬೇರ
ಈಶಾನ್ಯ
ಪ
ಉ
ಪೂ.

# ಬನವಾಸಿಯ ಕೈಪಿಡಿ

ಮಯೂರ ಮುದಿತಂ ಮಹಾಪ್ರಣವನಾದ ಸಂಚೋದಿತಂ
ದಯಾರ್ದ್ರ ಮಧುರೇಕ್ಷಣಂ ಸತತಭಕ್ತಿ ಮತ್ಸ್ವದ್ರುತಂ
ನಿದಾಘರವಿಚೇಷ್ಟಿತಂ ದುರಿತುಕೃತ್ಸ್ವ ಕರ್ಣಾಟಕಂ
ಮೃದಂಗಪದದುಂಪಟಂ ಭಜತ ವೈಜಯಂತೀನಟಂ !

ಕದಂಬಕುಲ ಪೂಜಿತಂ ಕರಧೃತತ್ರಿಶೂಲಂ ಲಸದ್
ವಿಧುಗ್ರಥಿತ ಜೂಟಕಾತ್ ಪ್ರಸೃತಗಂಗಯಾ ಶೋಭಿತಂ
ಹೃದಿ ಶೃಮಣಜೀವಿನಾಂ ಶ್ರುತಪುರಾಣ ರಮ್ಯಾತ್ಮನಾಂ
ಸದಾ ಭಜತ ಮಾಧವಂ ಪ್ರಕಟಲಿಂಗರೂಪಂ ಪ್ರಭುಂ !

ಅಕಾಲದಿಶಮತ್ಸರಂ ಪ್ರಥಿತವಿಗ್ರಹಾಷ್ಟೋತ್ತರಂ
ಪ್ರಚಿಂತ್ಯಮಮರೇಶ್ವರಂ ಪ್ರಶತ ಪಾರ್ವತ ಶ್ರೀಧರಂ
ಅಶಾಂತಿಶತವಾರಣಂ ದ್ವಿಷದಶೇಷ ನಿಸ್ತಾರಣಂ
ಪ್ರಶಸ್ತಗತಿಕಾರಣಂ ಭಜತ ಸತ್ ಕೃಪಾಧೋರಣಂ !

೧೯೩೧

# ಪಂಪ ಪ್ರಶಂಸೆ

೧

ಸೊಗಯಿಸಿ ಬಂದ ಮಾಮರನೆ ತಳ್ತಲಿವಳ್ಳಿಯೆ ಪೂತಜಾತಿಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ
ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರ ನೋಳ್ಪೊಡಾವ ಬೆ
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್ !

೨

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರಮಾದ ಮಾನಿಸರೆ ಮಾನಿಸರಂತವರಾಗಿ ಪುಟ್ಟಲೇ
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮರಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವದು ನಂದನದೊಳ್ ವನವಾಸಿ ದೇಶದೊಳ್ !

೩

ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೈದೊಡ ಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದಮಲ್ಲಿಗೆ ಗಂಡೊಡಮಾದ ಕೆಂದಲಂ
ಪೞ ಕೆಡೆಗೊಂಡೊಡಂ ಮಧುಮಹೋತ್ಸವ ಮಾದೊಡಮೇನನೆಂಬೆನಾ
ರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ !

೪

ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇ
ಯಮುಮಾದಕ್ಕರಗೊಟ್ಟಿಯುಂ ಚದುರರೊಳ್ಪಾತುಂ ಕುಳಿರ್ಕೋಳ್ವ ಜೋಂ
ಪಮುಮೇವೇಳ್ವುದನುಳ್ಳ ಮೈಸುಕಮುಮಿಂತೆನ್ನಂ ಕರಂ ನೋಡಿ ನಾ
ಡೆ ಮನಂಗೊಂಡಿರೆ ತೆಂಕನಾಡ ಪರೆಯಲ್ಕಿನ್ನೇಂ ಮನಂ ಬರ್ಕುಮೋ ?

# ಬನವಾಸಿಯ ಶಿಲ್ಪ ಮಂದಿರಗಳು

## ಪೀಠಿಕೆ

ಹೊಸ ಮೈಸೂರು ರಾಜ್ಯದ ಚಿತ್ರದುರ್ಗ, ಚಿಕ್ಕಮಗಳೂರು, ಹಾಸನ, ಶಿವಮೊಗ್ಗ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಧಾರವಾಡ, ಬೆಳಗಾವಿ ಜಿಲ್ಲೆಗಳನ್ನೂ ಗೋವೆ, ರತ್ನಗಿರಿ, ಕುಲಾಬಾ, ಪೂನಾ, ಮುಂಬಯಿ ಪ್ರದೇಶಗಳನ್ನೂ ಒಳಗೊಂಡ ಕುಂತಳ ( = ಕೊಂಕಣ ) ಸಾಮ್ರಾಜ್ಯವನ್ನು ಕ್ರಿ. ಶ. ೨೦೦ ರ ಬಳಿಕ ಕದಂಬ ಚಕ್ರವರ್ತಿಗಳು ಬನವಾಸಿಯಿಂದ ಆಳತೊಡಗಿದ್ದು ಇತಿಹಾಸ ಪ್ರಸಿದ್ಧ.

ಬನವಾಸಿಗೆ (೧) ಕೌಮುದಿ (೨) ಬೈಂದಿವಿ (೩) ಜಯಂತಿ (೪) ವನವಾಸಿ ಎಂಬ ನಾಲ್ಕು ಹೆಸರುಗಳು ಯುಗಾನುಕ್ರಮವಾಗಿ ಇವೆ. ಹಳಗನ್ನಡದಲ್ಲಿ ಇದನ್ನು 'ಬನವಸೆ' ಎಂದೂ ಈ ರಾಜಧಾನಿಯಿಂದ ಆಳಲ್ಪಡುತ್ತಿದ್ದ ಕುಂತಳವನ್ನು 'ಬನವಸೆ ನಾಡೆಂ' ದೂ ಕರೆಯಲಾಗುತ್ತಿತ್ತು.

ಪಶ್ಚಿಮ ಘಟ್ಟಗಳಲ್ಲಿ ಒಂದಾದ ಸಹ್ಯಾದ್ರಿಯಲ್ಲಿ ಹುಟ್ಟಿದ ವರದಾನದಿಯು ಬನವಾಸಿಯನ್ನು ೨ ಬದಿಗಳಲ್ಲಿ ಆವರಿಸಿದೆ. ಬನವಾಸಿ ಪಟ್ಟಣದ ಕೋಟೆ ೂ ಕ್ಷೇತ್ರಫಲ ೪. ೧೩ ಫರ್ಲಾಂಗುಗಳು. ಇಂದಿನ ಶಿರಸಿ ಪಟ್ಟಣದಿಂದ ಇದು ೧೫ ಮೈಲು ದೂರದಲ್ಲಿದೆ. ಎಸ್. ಟಿ. ಬಸ್ಸು ಈ ಪಟ್ಟಣಗಳನ್ನು ಸಂಬಂಧಿಸಿದೆ. ಶಿರಸಿಯು ತಾಲೂಕುಧಾನಿಯಾದರೆ ಬನವಾಸಿಯು ಹೋಬಳಿಧಾನಿ. ಬನವಾಸಿಯ ಇಂದಿನ ಜನಸಂಖ್ಯೆ ೩೦೮೭.

ಬನವಾಸಿ ವನಾಸ್ಯ, ಮಲೆನಾಡಿನ ನಡುವಿನ ಅರಣ್ಯದ (ಅರಣ್ಯರಹಿತವಾದ) ಬತ್ತದ ಗದ್ದೆಗಳ ಒಂದು ವಿಶಾಲ ಮೈದಾನ. ಇಲ್ಲಿ ರಾಷ್ಟ್ರಪಕ್ಷಿಗಳು (ನವಿಲುಗಳು) ಜಾಸ್ತಿ. ಇಲ್ಲಾಳಿದ ಮೊದಲ ಕದಂಬ ಚಕ್ರವರ್ತಿ ಮಯೂರವರ್ಮ ( ಕ್ರಿ. ಶ. ೨೪೦-೩೩೦ ). ಕಾವೇರಿಯಿಂದ

ನರ್ಮದೆಯವರೆಗಿನ ಕುಂತಳವನ್ನು ಈತನ ವಂಶದವರು ೬೧೦ ರ ವರೆಗೆ ಸ್ವತಂತ್ರ ಸಮ್ರಾಜರಾಗಿ ಆದರ್ಶ ರೀತಿಯಿಂದ ಆಳಿದರು. ಅವರಲ್ಲಿ ಮಯೂರ, ರಘು, ಕಾಕುತ್ಸ್ಥ, ಶಾಂತಿ ಮತ್ತು ರವಿವರ್ಮರು ಅತ್ಯಂತ ಪ್ರಖ್ಯಾತರು.

ಮಲೆನಾಡಮ್ಮನ ಮೊಗವಾದ ಬನವಾಸಿಯ ನಿಸರ್ಗ ಸೌಂದರ್ಯ ವನ್ನು ಕನ್ನಡದ ೧೦ನೆಯ ಶತಮಾನದ ಮಹಾಕವಿ ಪಂಪನು ಬಾಯಿ ತುಂಬ ಹೊಗಳಿದ್ದಾನೆ. ಶಾಲಿವಾಹನ ( ಶಾತವಾಹನ ) ಕಾಲದ ಮುಂದಿನದಾದ ಕದಂಬ ಮಹಾಯುಗದ ಶಿಲ್ಪದ ಮಾದರಿಗಳು ಕುಂತಳದ (ಇಂದಿನ ದಕ್ಷಿಣ ಭಾರತದ ಪಶ್ಚಿಮಾರ್ಧದ) ಆದ್ಯಂತವಾಗಿ ಕಾಣಬಹುದು ಅಂದಿನದು ವೇದಾಂತದ ( ಅದ್ವೈತದ ) ಸಂಪ್ರದಾ ಯವು ಅದ್ವಿತೀಯವಾಗಿದ್ದ ಕಾಲ. ಆದುದರಿಂದ ಶಿವಲಿಂಗಗಳ ದೇವ ಸ್ಥಾನಗಳಿಗೆ ಅಗ್ರಸ್ಥಾನವಿತ್ತು * ಹಾಗಾಗಿ ತಾಳಗುಂದದ ಪ್ರಣವೇಶ್ವರ, ಬನವಾಸಿಯ ಮಧುಕೇಶ್ವರ, (ಆನವಟ್ಟಿಯ ಸನಿಹದ) ಕುಬಟೂರಿನ ಕೈಟಭೇಶ್ವರ ದೇವಾಲಯಗಳು ಗೋಕರ್ಣೇಶ್ವರ, ಮಂಜುನಾಥೇಶ್ವರ ರಂತೆಯೇ ಪ್ರಸಿದ್ಧ ಯಾತ್ರಾ ಸ್ಥಳಗಳಾಗಿದ್ದವು.

ನೈಋತ್ಯ ಕರ್ಣಾಟಕದ ಶಿಲ್ಪ ಶೈಲಿಯ ಪ್ರಖ್ಯಾತಿಯು ಹೊಯ್ಸ ಳರ ( ೧೧ನೆಯ ಶತಮಾನದ ) ಕಾಲದಿಂದ ಆರಂಭವಾದುದರಿಂದ ಅದಕ್ಕೆ 'ಜಕ್ಕಣಶಿಲ್ಪ' ಎಂಬುದು ಜನಪ್ರಿಯ ಹೆಸರು. ಇದು ದ್ರಾವಿಡ ವೇಸರಗಳಿಂದ ಭಿನ್ನವಾದ ನಾಗರಶಿಲ್ಪಕ್ಕೆ ಹೆಚ್ಚು ಸಮೀಪವರ್ತಿಯಾ ದದ್ದು. ಆದರೆ ಇದರ ಬೆಳವಣಿಗೆ ಶಾಲಿವಾಹನ ಕಾಲದಿಂದ ಕದಂಬ ಯುಗದ ಮೂಲಕವೇ ಆದದ್ದು. ಹೊಯ್ಸಳ ಪೂರ್ವದ ಶಿಲ್ಪದ ಆದಿ ಭಾಗವು ಶಾಲಿವಾಹನ, ಕದಂಬ ಮತ್ತು ಚಾಲುಕ್ಯ ಚಕ್ರವರ್ತಿಗಳ ಆಳಿ ಕೆಗಳ ಅವಧಿಗಳನ್ನು ಒಳಗೊಂಡಿದೆ.

---

* ಶಿವಲಿಂಗದ ಪೀಠಗತವಾದದ್ದು ಬ್ರಹ್ಮಭಾಗ, ನಡುವಿನದ ವಿಷ್ಣುಭಾಗ ಮತ್ತು ಮೇಲಿನದು ಅಥವಾ ತುದಿಯದು ಶಿವಭಾಗ.

ಬನವಾಸಿಯ ಪ್ರಧಾನ ದೇವಾಲಯವನ್ನು ಮಧುಕೇಶ್ವರ ದೇವಾಲಯವೆನ್ನುತ್ತಾರೆ. ಇದರ ಇಂದಿನ ರೂಪವು ೧೧ನೆಯ ಶತಮಾನಕ್ಕಿಂತ ಹಿಂದಿನದಾಗಿರಲಾರದು ಎಂಬುದು ಪ್ರಸಿದ್ಧ ಅಭಿಪ್ರಾಯ. ಅದರಿಮ ಕದಂಬ ಕುಲದೈವತವೆಂದು ಪರಂಪರೆಯಿದೆ. ವಿಷ್ಣುವಿನ ಮಧುಸೂದನಾವತಾರ ಇಲ್ಲೇ ಆಯಿತೆಂಬ ಪುರಾಣ ಪ್ರಮಾಣವು ಇದರ ಪ್ರಾಚೀನತೆಗೆ ಐತಿಹ್ಯ ಸಾಕ್ಷಿಯಾಗಿದೆ. ಈ ದೇವಾಲಯವು ಕದಂಬ, ಚಾಲುಕ್ಯ, ರಾಷ್ಟ್ರಕೂಟ ಮತ್ತು ಗಂಗ, ಚಾಲುಕ್ಯ, ಹೊಯ್ಸಳ, ಯಾದವ, ಕದಂಬ, ವಿಜಯನಗರ ಮತ್ತು ಸುಧಾಪುರ ನಾಯಕ ಅರಸರ (೧೭೬೩) ವಂಶದವರ ಸೇವೆಗಳನ್ನು ಕಾಲಾನುಕ್ರಮವಾಗಿ ಪಡೆಯುತ್ತ ಬಂದಿದೆ. ಹೊಯ್ಸಳ-ಯಾದವರ ಪ್ರಭುತ್ವವಿಲ್ಲಿ ಅಲ್ಪ ಕಾಲದ್ದಾಗಿದ್ದರೂ ಹೊಯ್ಸಳ ದೊರೆಗಳ ಶಿಲ್ಪಪ್ರಿಯತೆ ಅತ್ಯಂತ ಹೆಚ್ಚಿನದಾಗಿದ್ದುದರಿಂದ ಜಗತ್ತಿನಲ್ಲಿ ಅದ್ವಿತೀಯವೆನ್ನಿಸಿದ್ದ ಈ ಶಿಲ್ಪದ ಬಾಹ್ಯಮುದ್ರೆ ಕೊನೆಯದಾಗಿ ನೈಋತ್ಯ ಕರ್ಣಾಟಕದ ಎಲ್ಲ ದೇವಾಲಯಗಳಲ್ಲೂ ಉಳಿಯುವಂತಾಯಿತು. ಹಾನುಗಲ್ಲಿನ ತಾರಕೇಶ್ವರ ದೇವಾಲಯವನ್ನು ಕಟ್ಟಿಸಿದಾಗಲೇ (೧೧೩೧) ಹೊಯ್ಸಳ ದೊರೆ ವಿಷ್ಣುವರ್ಧನನು ( ೧೧೧೧–೧೧೪೧ ) ಮಧುಕೇಶ್ವರ ದೇವಾಲಯವನ್ನೂ ಅಲ್ಲಿ ಇಲ್ಲಿ ಅಂಶತಃ ಜೀರ್ಣೋದ್ಧಾರ ಮಾಡಿರಬಹುದೆಂದು ಧಾರಾಳವಾಗಿ ಹೇಳಬಹುದು. ಕದಂಬ ಸಿಂಹ ಮುದ್ರೆಯ ಸುಧಾರಿಸಿದ ಆವೃತ್ತಿಯಾಯಿತು ಹೊಯ್ಸಳ ಸಿಂಹ ಮುದ್ರೆ. ಕದಂಬ, ಕದಂಬ-ಪೂರ್ವ ಶಿಲ್ಪ ಲಕ್ಷಣಗಳು ಉಳಿದಿವೆ.

ನಾಗರಶಿಲ್ಪವು ವಿಂಧ್ಯೋತ್ತರದ್ದು ಎಂಬುದು ಪಂಡಿತರ ಮತ. ಹಾಗಾದರ ನಮ್ಮ ಕದಂಬ ಶಿಲ್ಪವನ್ನು ‘ ಉಪನಾಗರ ’ ವೆನ್ನುವದು ಒಳಿತು. ಇದು ದಕ್ಷಿಣ ಭಾರತದ ಮಧ್ಯಪ್ರದೇಶದ ಪಶ್ಚಿಮ ಭಾಗದ ನಾಗರಶಿಲ್ಪ. ನಾಗರು ಕಂದಮಿಳರು ಅಥವಾ ಪೂರ್ವಾರ್ಯರು; ತಮಿಳರು; ದ್ರಾವಿಡರು; ಅವರದು ದ್ರಾವಿಡ ಶಿಲ್ಪದ ಪ್ರಸ್ಥಾನ.

ಕದಂಬ ಶಿಲ್ಪದ ಲಕ್ಷಣಗಳು ಈ ತೆರನಾಗಿವೆ :- ಐಹೊಳೆಯ ದುರ್ಗಾದೇವಾಲಯದಲ್ಲಿ ಕಂಡು ಬರುವಂತೆ (೧) ಬೌದ್ಧ ಪದ್ಧತಿಯ apsidal cave ನಡು ತಿರುಹಿನ ಗುಹೆಯು 'ದಾಗಬ'ಕ್ಕೆ ಸದೃಶವಾಗಿರುವದು, (೨) ನಡುವೆ ೨ ಸಾಲು ಕಂಬಗಳಿರುವುದು, (೩) ಅವುಗಳ ದೆಸೆಯಿಂದ ನಡುಮನೆ ಮತ್ತು ಪಾತಾಳ ಅಂಕಣಗಳಂತಹ ಆಕಾರಗಳು ಕಾಣಬರುವಂತಾಗುವದು, (೪) ಈ ಪಾತಾಳ ಅಂಕಣ (verandah) ಗಳು ಗರ್ಭಗುಡಿಯ ಹಿಂದೆ ಅರ್ಧಚಂದ್ರಾಕಾರವಾಗಿ ( ಇಡಿ ಆಕಾರದ ಅನುಗುಣವಾಗಿ ) ಕೂಡಿ ಪ್ರದಕ್ಷಿಣಾಪಥವಾಗಿರುವದು, (೫) ಈ ಗರ್ಭಗುಡಿಯ ಗೋಪುರವು (ಶಿಖರವು) ವೃತ್ತಾಕಾರದ ಬಾಹ್ಯರೇಖೆಯುಳ್ಳದ್ದಾಗಿರುವದು ಮತ್ತು ಆಯುತ (horizontal) ಮೆಟ್ಟಿಲುಗಳನ್ನು ಅದರ ಮೇಲೆ ರಚಿಸಿರುವದು- ಈ ಗೋಪುರವನ್ನು "ಕದಂಬ ವಿಮಾನ" ಎನ್ನುತ್ತಾರೆ. ಇದು ಉತ್ತರ ಭಾರತದ ನಾಗರ ಬೌದ್ಧ ಪ್ರಸ್ಥಾನದ ಸುಧಾರಿಸಿದ ಆವೃತ್ತಿ. ಹಿಂಬಾಗದ ನಡುದಿರುಹಿನ ಅರ್ಧಚಂದ್ರಾಕೃತಿಯ (ಗರ್ಭಗುಡಿಯ) ಆವರಣಭಿತ್ತಿಯು ಕ್ರಮೇಣ ದೀರ್ಘ ಚತುರ್ಭುಜಾಕಾರಕ್ಕೆ ಪರಿವರ್ತಿತವಾಯಿತು; ಹಾಗೇ ಇಡಿ ದೇವಾಲಯದ ಸುತ್ತ ಇರುತ್ತಿದ್ದ ಪ್ರದಕ್ಷಿಣಾಪಥವು ಅನಂತರ ಗರ್ಭಗುಡಿಯ ಸುತ್ತಿಗೆ ಮಾತ್ರ ಪರಿಸೀಮಿತವಾಯಿತು. ಬನವಾಸಿಯ ಮಧುಕೇಶ್ವರ ದೇವಾಲಯದ ಗರ್ಭಗುಡಿ ಈಗ ಈ ಅರ್ವಾಚೀನ ಆಕಾರವನ್ನು ತಳೆದಿದೆ. ಆದರೆ ಇಲ್ಲಿ ಒಳ ಪ್ರದಕ್ಷಿಣಾಪಥವು ಪ್ರದಕ್ಷಿಣೆಗೆ ಮುಕ್ತವಾಗಿದ್ದಿಲ್ಲ; ಹೊರಪಥವೊಂದೇ ಮುಕ್ತವಿತ್ತು. ಇತ್ತೀಚೆಗೆ ಒಳಪಥವನ್ನೂ ಮುಕ್ತಗೊಳಿಸಲಾಗಿದೆ.

ಅರ್ವಾಚೀನ ಚಾಲುಕ್ಯಾವಧಿಯಲ್ಲಿ ಕಂಡು ಬರುವ ರಚನಾರೀತಿಗೆ ಪಟ್ಟದ ಕಲ್ಲಿನ ದೇವಾಲಯಗಳು ಮಾದರಿಗಳು. ಅಲ್ಲಿ ಗರ್ಭಗುಡಿಯೆದುರು ನಂದಿಯ (ಎತ್ತಿನ ವಿಗ್ರಹದ) ಮಂಟಪವಿದೆ, ಪೂರ್ವಪಶ್ಚಿಮಗಳಲ್ಲಿ ಹೊರಗೆ ಹೋಗಲು ದ್ವಾರಗಳಿವೆ. ಅವು ಸುತ್ತಿನ

ಗೋಡೆಗಳಿಗೆ ಸಂಬಂಧಿಸಿವೆ. ಪ್ರದಕ್ಷಿಣಾಪಥದಲ್ಲಿ ೩ ಗೂಡುಗಳಿವೆ. ಪ್ರತ್ಯೇಕವೆನ್ನಿಸುವ ಮುಖಮಂಟಪವನ್ನು ಗರ್ಭಗುಡಿಗೆ ಜೋಡಿಸಲಾಗಿದೆ. ಗರ್ಭಗುಡಿಯ ಮೇಲ್ಛಾವಣಿಯನ್ನು ೧೮ ಮಹಾಸ್ತಂಭಗಳು ಹೊತ್ತಿರುವದು ಉತ್ತರ ಭಾರತೀಯ ಪದ್ಧತಿಯನ್ನು ನೆನಪಿಗೆ ತಂದುಕೊಡುತ್ತದೆ

ಅರ್ವಾಚೀನ ಕದಂಬರ ಸ್ತಂಭ ಮತ್ತು ಗೂಡುಗಳ ಅಲಂಕಾರ ಪ್ರಕಾರಗಳಲ್ಲಿ ಆ ಕಾಲದ ಶಿಲ್ಪಿಗಳು ಚಾಲುಕ್ಯರ ಮತ್ತು ಪಲ್ಲವರ miniature towers ಹ್ರಸ್ವ ರೂಪದ ಗೋಪುರಗಳನ್ನು ಅಡಕಗೊಳಿಸಿದರು. ಆದರೆ ಕದಂಬ ವಿಮಾನ ರಚನೆಯ ರೀತಿಯನ್ನು ಬಿಡಲಿಲ್ಲ. ಹಲಸಿಯಲ್ಲಿ ಮೃಗೇಶವರ್ಮ ಕಟ್ಟಿಸಿದ ಬಸದಿಯು ಪ್ರಾಚೀನ (೫ನೇಯ ಶತಮಾನ) ಕದಂಬ ಶೈಲಿಯದಾದರೆ ತಾಳಗುಂದದ ಪ್ರಣವೇಶ್ವರ ದೇವಾಲಯವು ಅರ್ವಾಚೀನ ಕದಂಬ ಶೈಲಿಯದು. ಶಾಲಿವಾಹನ (ಆಂಧ್ರಭೃತ್ಯ) ಶೈಲಿಯು ಇವುಗಳ ಮೂಲ ಎಂಬುದು ಜಾರ್ಜ ಮೊರಿಸರ ಮತ. ಮಧುಕೇಶ್ವರ ದೇವಾಲಯದ ಉರುಟು ಕಂಬಗಳು ಹೊಯ್ಸಳವಾಗಿ ಮಾರ್ಪಡುತ್ತಿದ್ದ ಅರ್ವಾಚೀನ ಕದಂಬಶೈಲಿಯವು. ಅರ್ವಾಚೀನ ಕದಂಬರು ಹೊಯ್ಸಳರ (೧೦೩೧–೧೩೧೫) ಸಮಕಾಲೀನರು; ಹೊಯ್ಸಳ ರಾಜಧಾನಿಯ ಪ್ರದೇಶವು ಹಿಂದೆ ಪ್ರಾಚೀನ ಕದಂಬ ಚಕ್ರೇಶ್ವರರ ಆಳಿಕೆಗೆ ಒಳಪಟ್ಟಿತ್ತು; ಆದರೆ ಅರ್ವಾಚೀನ ಕದಂಬರ ಬನವಾಸಿ ಪನ್ನಿರ್ಛಾಸಿರದ ಮೇಲೆ ಹೊಯ್ಸಳರ ಪ್ರಭುತ್ವವಿರಲಿಲ್ಲ– ಇದ್ದರೆ ಅದು ಒಂದೆರಡು ಸಲ, ವರ್ಷ–ಆರುತಿಂಗಳಷ್ಟು ಮಾತ್ರ. ಅದೂ ಒಂದೆರಡು ಚಿಕ್ಕ ಭಾಗಗಳ ಮೇಲಷ್ಟೆ.

**ಮಧುಕೇಶ್ವರ** * ದೇವಾಲಯದ ಗರ್ಭಗುಡಿ, ಶುಕನಾಸಿ, ಮುಖಮಂಟಪಗಳ ಸುತ್ತಲಿನ ಪ್ರದಕ್ಷಿಣಾಪಥದ ಎಡಗಡೆಗಿರುವ ಮಹಾವರಣಭಿತ್ತಿಯಲ್ಲಿ ಅಷ್ಟದಿಕ್ಪಾಲಕರನ್ನು ಬಿಟ್ಟೂ ಉಳಿದ ವಿಗ್ರಹ

---

* ಮಧುಕೇಶ್ವರ ಲಿಂಗ ತಾಳಗುಂದೇಶ್ವರನ ಕಾಲದ್ದು, ಗರ್ಭಗುಡಿಯ ಶಿಲ್ಪ ಪಲ್ಲವರ ಕಾಲದ್ದು, ಅಂತರಾಳದ್ದು ಬಾದಾಮಿಯ ಚಾಲುಕ್ಯರ ಕಾಲದ್ದು.

ಗಳು ಬೇಕಾದಷ್ಟಿವೆ. ಆದುದರಿಂದ ಈ ದೇವಾಲಯವೊಂದು ಮೂರ್ತಿ ಸಂಗ್ರಹಾಲಯ ಎನ್ನುವಂತಿದೆ.

ಪ್ರದಕ್ಷಿಣಾಕಾರವಾಗಿ ನಾವು ಹೊರಟರೆ ಮೊದಲು ನಮಗೆ ಶಿಲಾ ಮಂಟಪವೊಂದರಲ್ಲಿ ಅತ್ಯಂತ ಕಲಾಲಂಕಾರ ಪೂರ್ಣವಾದ ಒಂದು **ಕಲ್ಲು ಮಂಚ** ಸಿಗುತ್ತದೆ. ಸುಧಾಪುರದ (ಸೋದೆಯ) ರಘುನಾಥ ನಾಯಕನು ಇದನ್ನು ೧೬೨೮ರಲ್ಲಿ ಮಾಡಿಸಿ ಮಧುಕೇಶ್ವರನಿಗೆ ಅರ್ಪಿಸಿದನು. ಹಾನುಗಲ್ಲಿನಿಂದ ಬನವಾಸಿ ನಾಡನ್ನು ೧೧೭೫–೧೧೯೪ರ ಅವಧಿಯಲ್ಲಿ ಆಳುತ್ತಿದ್ದ ೨ನೆಯ ಶಾಂತಿವರ್ಮನ ಕಾಲದಲ್ಲಿ ಮಧುಕೇಶ್ವರನ ಮಹಾಪೂಜಾರಿಯ ಉಲ್ಲೇಖವನ್ನು ಶಾಸನಗಳಲ್ಲಿ (E.C. XIII Sb. ೨೫೨–೨೬೨) ಮಾಡಲಾಗಿದೆ. ಸದ್ಯದ ದೇವಾಲಯ ಬಹುಶಃ ಆಗ ಪುನಾರಚಿತವಾದದ್ದಾಗಿರಬೇಕು ಕಲ್ಲು ಮಂಟಪದ ಉದ್ದ ೯೦ ಇಂಚು, ಅಗಲ ೬೦ ಇಂಚು, ಎತ್ತರ ೯೦ ಇಂಚು. ಇದರ ಕಾಲು ಮತ್ತು ಕಂಬಗಳ ಕುಸುರುಗೆಲಸ ಆತ್ಯಾಕರ್ಷವಾಗಿದೆ. ಪ್ರಾಚೀನ ವೈಭವದ ಮಧುಕೇಶ್ವರನ ಪ್ರತಿಷ್ಠೆಗೆ ಇದು ತಕ್ಕದ್ದಾಗಿದೆ.

ಅನಂತರ ಸುಖಾಸನದಲ್ಲಿ ಕುಳಿತ ಧೃಷ್ಟಪುಷ್ಟನಾದ **ಲಕ್ಷ್ಮೀನರಸಿಂಹ** ಸಿಗುತ್ತಾನೆ. ಈತನು ಸುಧಾಪುರದ ಆದಿ ಮಹಾನಾಯಕನಾದ ಅರಸಪ್ಪನ (೧೫೫೫–೧೫೯೮) ಕುಲದೇವತೆ: ಎತ್ತರ ೩೧ ಇಂಚು, ಅಗಲ ೨೭ ಇಂಚು, ಅವನ ಎಡತೊಡೆಯ ಮೇಲೆ ಪುಟ್ಟ ಲಕ್ಷ್ಮೀ ಇದ್ದಾಳೆ ಮುಂದೆ ಹಾಗೇ ಕುಳಿತ **ಧುಂಡಿರಾಜ ಗಣಪತಿ** ಕಾಣಿಸುತ್ತಾನೆ ಎತ್ತರ ೪೧ ಇಂಚು. ಅಗಲ ೨೮ ಇಂಚು, ಈ ವಿಗ್ರಹಗಳು ಬಲಿಷ್ಠವಾಗಿವೆ. ಗಂಡುಗಾಡಿಯಿಂದ ಆಕರ್ಷಿಸುತ್ತವೆ ೪ನೆಯ ಕಲಾವಸ್ತುವೆಂದರೆ ಬಸವಲಿಂಗೇಶ್ವರ ಗುಡಿಯ ಗೋಡೆಯ ಹೊರಮೈಯ ಶಿಲಾ ಚಿತ್ರಗಳ ಸಾಲು. ಇದರಲ್ಲಿ ಮುರಲೀಧರ ಬಹುಚೆಂದವಾಗಿ ತೋರುತ್ತಾನೆ.

ಆಮೇಲೆ **ಸೂರ್ಯನಾರಾಯಣ** ತನ್ನ ಗುಡಿಯಲ್ಲಿ ನಿಂತದ್ದು ಕಾಣಬರುತ್ತದೆ. ಆರ್ಯ–ದ್ರಾವಿಡರ ೩೩ ಕೋಟಿ ದೇವತೆಗಳ ಮೂಲಾ

ಕಾರ ಸೂರ್ಯ. ಈತನ Elegance ಹಿತ ಮಿತ. ಮಧುರ ಆಕೃತಿ ಸರಳ ಜೀವನವನ್ನೂ ಉದಾತ್ತ ಉಪಾಸನೆಯನ್ನೂ ಧ್ವನಿಸುತ್ತದೆ: ಎತ್ತರ ೪೧ ಇಂಚು, ಅಗಲ ೨೨ ಇಂಚು.

ಮುಂದೆ ನಡೆದರೆ ಕೊಡಲಿಯ ರಾಮ! ಕೊಂಕ(ತ)ಣ ಪುರ ವೆನ್ನಿಸಿದ್ದ ಬನವಾಸಿಯ ನಾಡಿನ ತೀರ ಪ್ರದೇಶವನ್ನು (ಕೊಡಲಿಯನ್ನು ಸಹ್ಯಾದ್ರಿ ಶಿಖರದಲ್ಲಿ ನಿಂತು ಬೀಸಿ ಒಗೆದು) ಪಡೆದ ಮಹಾಬ್ರಾಹ್ಮಣ ನಾಗಿದ್ದ **ಭಾರ್ಗವನು** ಗಂಡು ಗೊಡಲಿಯನ್ನು ಹಿಡಿದು ಕನ್ನಡಿಗರ ಕೆಚ್ಚನ್ನು ಎಚ್ಚರಿಸುತ್ತಿದ್ದಾನೆ! ಇವನ ತಾಯಿ ರೇಣುಕೆ ಬನವಾಸಿ ಯಿಂದ ೧೨ ಮೈಲು ದೂರದ ಕದಂಬೋಪರಾಜಧಾನಿಯಾಗಿದ್ದ ಚಂದ್ರಗುತ್ತಿ (ಚಂದ್ರಗುಪ್ತಿ) ಯಲ್ಲಿ ೭ ಸುತ್ತಿನ ಕೋಟೆಯನ್ನಾಳು ತ್ತಿದ್ದಾಳೆ! ಈ ನೆಲದಲ್ಲಿ ಪರಶುರಾಮನು ತಾಮಸ ಕ್ಷಾತ್ರವನ್ನು ಸಂಹ ರಿಸಿದ ತೇಜಸ್ಸು ಸತ್ತ್ವವನ್ನು ತಿರುಗಿ ಎಬ್ಬಿಸದಿರದು: ಎತ್ತರ ೧೮॥ ಇಂಚು, ಅಗಲ ೧೧॥ ಇಂಚು.

ಮೂಲ ಮಧುಕೇಶ್ವರ (ಮಧುಕನಟ, ಮಧುಕನಾಥ, ಮಧು ಲಿಂಗ) ದೇವಾಲಯಕ್ಕೆ ಸಮರ್ಪಿಸಲಾಗಿದ್ದ **ಮಹಾನಾಗ** ಬಳಿಕ ಬುಸ್ಸೆನ್ನುತ್ತ ನಮಗೆ ಎದುರಾಗುತ್ತದೆ! ಇದನ್ನು ಚುಟುವಂಶದ (ಕ್ರಿ. ಶ. ೨೦೦) ಮಹಾಭೋಜಿ ಶಿವಸ್ಕಂದ ನಾಗಶ್ರೀ ಎಂಬ ರಾಣಿಯು ಮಧುಕೇಶ್ವರನಿಗೆ ಅರ್ಪಿಸಿದ್ದು ವಿಗ್ರಹದ ಪಕ್ಕದಲ್ಲೇ ಬರೆ ದಿದೆ. ಇದು ಕನ್ನಡದ ಅತ್ಯಂತ ಪ್ರಾಚೀನ ನಾಗವಿಗ್ರಹ. ಇದರ ಕಲಾಕುಶಲತೆ ಪರಿಪೂರ್ಣತೆಯನ್ನು ಮುಟ್ಟಿದೆ. ಇಂಗ್ಲೀಷಿನ ಎಂಟೆಂಬ ಅಂಕೆಯನ್ನು ಒಂದರ ಮೇಲೊಂದರಂತೆ ಅಡ್ಡ ಮಲಗಿಸಿದರೆ ನಾಗನ ತೆಕ್ಕೆಯು ಹೇಗೆ ಸುಲಭೋಹ್ಯವಾಗುತ್ತದೆ. ಇದರ ಹೆಡೆಗಳು ಐದು; ಎತ್ತರ ೫೩ ಇಂಚು. ಅಗಲ ೩೫ ಇಂಚು.

ಬೇಲೂರಿನ **ಚೆನ್ನಕೇಶವನ** ಮಾದರಿ ಆ ಮೇಲೆ ಸಿಗುತ್ತದೆ. ಈ ವಿಗ್ರಹದ ಹೊಯ್ಸಳ sophistication ನಾಗರಿಕತೆ ಎದ್ದು

ಕಾಣುತ್ತದೆ. ಇದು ನಿಂತ ನಿಲುವು ಪ್ರಸನ್ನತೆಯನ್ನು ಪರಿಮಳಿಸು ತ್ತದೆ: ಎತ್ತರ ೪೫ ಇಂಚು, ಅಗಲ ೨೦ ಇಂಚು.

ಮುಖ್ಯವಾದ ಮಧುಕೇಶ್ವರ ದೇವಾಲಯಕ್ಕೆ ತಾಗಿಯೇ ಅದಕ್ಕೆ ಎದುರಾದವರ ಬಲಕ್ಕೆ ಮಧುಮತಿಯಾದ **ಪಾರ್ವತಿಯ** ದೇವಾಲಯ ವಿದೆ. ಲಿಂಗಾರಾಧನೆಗೆ ಸಮಕಾಲೀನವಾದ ಶಕ್ತ್ಯಾರಾಧನೆಗೆ ಪಾರ್ವತಿ ಕುರುಹಾಗಿದ್ದಾಳೆ. ಲಿಂಗಾರಾಧನೆ **Austro-Asiatic** ಆಸ್ಟ್ರೇಲಿಯ -ಏಶಿಯ ಮೂಲ ನಿವಾಸಿಗಳ ಕಾಲದ್ದೆಂದು ತಜ್ಞರ ಮತ. ಆದುದ ರಿಂದ ಶಕ್ತಿಗೂ ಆದಿ ಶಕ್ತಿ, ಆದಿಮಾಯೆ ಎಂಬ ಹೆಸರುಗಳು ಬಂದಿವೆ. ನಿಂತ ಈ ತ್ರಿಪುರ ಸುಂದರೀ ವಿಗ್ರಹದ ಎತ್ತರ ೪೨ ಇಂಚು, ಅಗಲ ೨೬ ಇಂಚು. ಮಧುಕೇಶ್ವರನ ಮುಖ ಮಂಟಪಕ್ಕೆ ಸಮನಾಗಿ ಎದುರು ನಿಂತ ನಮ್ಮ ಎಡಗಡೆ ಹೊರಗೆ 'ಸರ್ವಶುಕ್ಲೆ' ಯಾದ **ಶಾರದೆಯ** ಅತಿ ರಮ್ಯ ಮೂರ್ತಿಯಿದೆ. ಇದರ ಲಾಲಿತ್ಯ-ಮಾಧುರ್ಯಗಳು ಇದ ರದೇ ! ಅವಳ ಅಲಂಕಾರಗಳು ಊಹ್ಯ.

ಶರದಚಂದ್ರನ ಕಿರಣಗಳ ಧಿ-
ಕ್ಕರಿಪ ಶುಕ್ಲಾಂಬರದ ಪದನೂ-
ಪುರದ ಕಾಂಚಿಯ ಕಂಕಣದ ಕಿಂಕಿಣಿಯ ಝೇಂಕೃತಿಯು ।
ಕೊರಳ ಹಾರದ ಕರ್ಣಪೂರದ
ಕರದ ವೀಣೆಯ ಪುಸ್ತಕದ ಶುಭ-
ಕರವದನೆ ವಾಗ್ದೇವಿ !

ಕುಳಿತ ಇವಳ ಎತ್ತರ ೨೬ ಇಂಚು, ಅಗಲ ೨೦ ಇಂಚು. ಈಕೆಯ ಪೀಠದ ಕೆಳಗೆ ಮತ್ತೆ ಐದು ಮುಖಗಳ **ನಾಗ !** ಈ ಸರ್ಪದ ಎತ್ತರ ೬೬ ಇಂಚು, ಅಗಲ ೧೪ ಇಂಚು. ಕುಂತಳವು ಕೆಲಕಾಲ ನಾಗರಖಂಡ ದಿಂದ ಗಣ್ಯವಾಗಿತ್ತು. ಕದಂಬರನ್ನು ನಾಗರೆಂದು ಹೇಳುತ್ತಾರೆ. ನಾಗರಖಂಡದ ಕದಂಬರಾಜಧಾನಿಯು ಶಿರಾಳಕೊಪ್ಪದ ಸನಿಹದ ಬಂದಣಿಕೆ ( ಬಾಂಧವಪುರ ) ! ದಕ್ಷಿಣ ಕನ್ನಡದ ಪುತ್ತೂರು ತಾಲೂ

ಕಿನ ಸುಬ್ರಹ್ಮಣ್ಯವು ( ಅಹಿಕ್ಷೇತ್ರ ) ನಾಗಲೋಕದ ದೇವರಾಜಧಾನಿ ! ಕನ್ನಡಿಗರಲ್ಲಿರುವ ನಾಗಪ್ಪ-ನಾಗಮ್ಮಂದಿರನ್ನು ಎಣಿಸಿದರೆ ಸುಬ್ರಹ್ಮಣ್ಯ ಷಷ್ಠಿಯ ಮಹತ್ವವೂ, ಕದಂಬರಲ್ಲಿ ಶಿವಸ್ಕಂದ, ಸ್ಕಂದ ( ಕಂಗ ), ಮಯೂರ ( + ವಾಹನ ), ಷಷ್ಟ, ( ಚಟ್ಟ ) ಎಂಬ ಹೆಸರುಗಳನ್ನು ರಾಜರು ಧರಿಸುತ್ತಿದ್ದುದರ ಅರ್ಥವೂ ಪಳಚ್ಚನೆ ಹೊಳೆಯುತ್ತದೆ. ನಾಗರು ಭೋಗಿಗಳು : ಕನ್ನಡಿಗರಿಗೇನು ಕಡಿಮೆ ಭೋಗಿಗಳೇ ? ಶಿವಮೊಗ್ಗ-ದಕ್ಷಿಣ ಕನ್ನಡ ಪ್ರದೇಶವ ಸೇಂದ್ರಕರು ನಾಗಕುಲದ ಅರಸುಗಳಲ್ಲಿ ಆದ್ಯರು ! ಕುಲವಿಲ್ಲಿ Race ಅಲ್ಲ.

ಮಧುಕೇಶ್ವರನಿಗೆದುರಾಗಿ ಮುಖಮಂಟಪದಲ್ಲಿ ನಿಂತರೆ ನಮ್ಮ ಎಡಗಡೆಯಲ್ಲಿ ಭಾರಿ **ಶಿಲಾಮಂಟಪ** ಕಾಣಿಸುತ್ತದೆ. ಇದೊಂದು ಸುಂದರ ಕಲಾಕೃತಿ. ಸುಧಾಪುರದ ೧ನೆಯ ಸದಾಶಿವರಾಯ ಇದನ್ನು ಉಮಾಮಹೇಶ್ವರ ವಿಗ್ರಹಗಳ ಸಹಿತವಾಗಿ ಮಾಡಿಸಿ ಮಧುಕೇಶ್ವರ ನಿಗೆ ಅರ್ಪಿಸಿದನು : ಎತ್ತರ ೧೧೨ ಇಂಚು, ಅಗಲ ೬೯ ಇಂಚು. ಇದರ ಹೆಸರು " ತ್ರೈಲೋಕ್ಯಮಂಟಪ ".

ಮಧುಕೇಶ್ವರನ ಗರ್ಭಗುಡಿಯ ಎದುರಿನ ಶುಕನಾಶಿಯ ಕೆಳಗಿನ ಅಂತರಾಳದಲ್ಲಿ ಹೊಕ್ಕರೆ, ನಮ್ಮ ಬಲಗಡೆಗೆ ಒಂದು ಗೂಡಿನಲ್ಲಿ **ಆದಿಮಾಧವ** ನಿಂತದ್ದು ಕಾಣಿಸುತ್ತದೆ. ಮಧುಕೈಟಭ ಸಂಹಾರಿ ಯಾದ ಮಾಧವನಿವನು; ಇವನು ಮಧುವಿಗಿತ್ತ ವರಪ್ರಸಾದದಂತೆ ಮಧುಲಿಂಗದಲ್ಲಿ ಶಿವಬಂದು ನೆಲೆಸಿದನು. ಆದಿಮಾಧವನ * ಎತ್ತರ ೬೮ ಇಂಚು, ಅಗಲ ೪೫ ಇಂಚು.

**ಮಧುಲಿಂಗವು** " ಮಧುಕ್ಷರತಿ " ( Exudes honey ) ಎಂಬಂತಿದೆ. ನಿರಾಕಾರ ಸೂಚಕವಾದ ಲಿಂಗಕ್ಕೇನಾದರೂ ಸೌಂದರ್ಯ ವಿದ್ದರೆ ಅದರ ಪೂರ್ಣತೆಯನ್ನು ಮಧುಲಿಂಗನಲ್ಲಿ ಕಾಣಬಹುದು.

---

* ಇದನ್ನು ಪದಚ್ಯುತಗೊಳಿಸಿ ಮಧುಲಿಂಗವನ್ನು ಪೀಠದ ಮೇಲೆ ಸ್ಥಾಪಿಸ ಲಾಯಿತೆಂಬುದು ಶಿಲ್ಪ ಶಾಸ್ತ್ರೀಯವಾಗಿ ಅಸಮರ್ಥನೀಯ.

ಮಧುವು ( ಬೃಹದಾರಣ್ಯಕದಲ್ಲಿ ) ಪಾರಸ್ಪರಿಕ ಆಧಾರವಾದ ಸ್ನೇಹ, ಸ್ನೇಹಮಯಪುರುಷ, ಸರ್ವಾಧಾರವಾದ ವಿಶ್ವಾತ್ಮ, ಬ್ರಹ್ಮಶ್ರೀ, ಬ್ರಾಹ್ಮೀತತ್ವ ! ಸ್ಥಳಪುರಾಣದಲ್ಲಿ ಕೈಟಭಾಸುರನ ಅಣ್ಣ ಮಧುಕಾಸುರ. ಈ ಇಬ್ಬರೂ ಅಧಿಕಾರದ ಅಹಂಮದದ ಪ್ರತೀಕಗಳು; ಈಶ್ವರಾಧಿಕ್ಯವನ್ನು ಒಪ್ಪಿದಾಗ ಇವರು ಮುಕ್ತರಾದರು, ಅಮರರಾದರು, ಸ್ವತಂತ್ರರಾದರು, ಬ್ರಹ್ಮೈಕ್ಯರಾದರು ! ಸಪೀಠ ಮಧುಲಿಂಗದ ಎತ್ತರ ೬೪ ಇಂಚು, ಅಗಲ ೫೯ ಇಂಚು.

ಜಗದಾಧಾರವಾದ ಈಶ ಶಕ್ತಿಯ ಕೌಮಾರ ದಶೆಯನ್ನು ಕುಮಾರ ( ಷಣ್ಮುಖ, ಸುಬ್ರಹ್ಮಣ್ಯ, ನಾಗ ) ಪ್ರತಿನಿಧಿಸುತ್ತಾನೆ. ಗರ್ಭಗುಡಿಯ ಪ್ರದಕ್ಷಿಣಾಪಥದಲ್ಲಿ ನಾವು ಹೊಕ್ಕರೆ ಬಲಗಡೆ ಒಂದು ಗೂಡಿನಲ್ಲಿ **ಕಾರ್ತಿಕೇಯನು** ಮಯೂರವಾಹನನಾಗಿರುವ ಸೊಬಗು ಕಣ್ಣಿಗೆ ಹಬ್ಬವಾಗುತ್ತದೆ. ದೇವಸೇನಾಪತಿಯಾದ ಈತನಿಂದಲೇ ಕನ್ನಡ ರಾಜ್ಯಗಳ ಸೇನಾಪತಿಗಳು ಸ್ಫೂರ್ತಿಯನ್ನು ಪಡೆಯುತ್ತ ಬಂದದ್ದು; ಕದಂಬರ ಮಯೂರಶರ್ಮನು ಮಯೂರವರ್ಮನಾದದ್ದು ಈ ಆರು ಮೊಗನ ಶಕ್ತಿಯನ್ನು ತನ್ನಲ್ಲಿ ಆವಾಹಿಸಿಕೊಂಡೇ ! ರಾಷ್ಟ್ರಪಕ್ಷಿಯೆಂದು ಮಯೂರವನ್ನು ಆಯ್ದುಕೊಂಡ ಭಾರತವು ಈ ಸಪೀಠ ಮಯೂರ ವಾಹನನನ್ನು ರಾಷ್ಟ್ರಮುದ್ರೆಯನ್ನಾಗಿ ಸ್ವೀಕರಿಸಲಾರದೆ ? ಇದರ ಎತ್ತರ ೧೯ ಇಂಚು, ಅಗಲ ೧೬ ಇಂಚು.

ಈಗ ಮಧುಕೇಶ್ವರ ಗುಡಿಯ ಮುಖಮಂಟಪದ ಮಧ್ಯದಲ್ಲಿರುವ **ನೃತ್ಯಮಂಟಪಕ್ಕೆ** ಹೋಗೋಣ. ಮಮಕಾರ ರಾಜನ ಮಗಳಾದ ಮಾಯೆ ಇಲ್ಲಿ ಕುಳಿತ ಶಿವೋಹಮೆಂಬ ಪರಮಾನುಭಾವವನ್ನು ಕೊನೆಯಲ್ಲಿ ಸಾಧಿಸಿದ ಸಾಧಕ ಅಲ್ಲಮನೆದುರು ನೃತ್ಯಮಾಡಿ ಅವನಲ್ಲಿ ಸ್ತ್ರೀಭೋಗದ ದಾಪವನ್ನು ಮೂಡಿಸಲಾರದೆ ಹೋದಳೆಂದು ಕಥೆಯಿದೆ. ಅಲ್ಲಮನ ಕಾಲ ೧೧೬೦. ಆಗ ಹಾನುಗಲ್ಲಿನಲ್ಲಿ ಬನವಾಸಿ **ಕೀರ್ತಿದೇವ** ಕದಂಬರಾಯನು ಮಹಾಮಂಡಲೇಶ್ವರನಾಗಿದ್ದನು. ಅವನಿಗೆ ಮಾಯೆಯೆಂಬ ಮಗಳಿದ್ದದ್ದಕ್ಕೆ ಐತಿಹಾಸಿಕ ಆಧಾರವಿಲ್ಲ;

ಪುರಾಣಾಧಾರದಲ್ಲಿ ಮಾಯೆಯು ತಂದೆ ಮಮಕಾರನೆಂದಿದೆಯಲ್ಲದೆ **ಕೀರ್ತಿದೇವನು** ಎಂದು ಇಲ್ಲ. ಆದರೆ ಐತಿಹ್ಯದ ಅರ್ಥ ಇಷ್ಟೆ: ಬನವಾಸಿಯು "ಜಾಗದ **ಭೋಗದಕ್ಕ**ರದ ಗೊಟ್ಟಿಯು ಗೇಯದಲಂಪಿ ಸಿಂಪ್ರಗಳ್ಗೆ ಆಗರ' ಎಂಬುದನ್ನು ಕೇಳಿದ್ದ ಚೆನ್ನಬಸವ ಪುರಾಣಕಾರನು ಅಲ್ಲಮನ ಮಾರಮರ್ದನಕ್ಕೆ ಬನವಾಸಿಯನ್ನು ರಂಗವನ್ನಾಗಿ ಆಯ್ದು ಕೊಂಡಿರಬೇಕು. ಮಾಯೆಯೆಂದರೆ ಮರ್ತ್ಯ, ಅದನ್ನು ಅಲ್ಲಮ ಅಲ್ಲಗಳೆದ. ಸಾಹಿತ್ಯ-ಸಂಗೀತ-ನೃತ್ಯ ಸೇವೆಗಳು ದೇವರ ಪೂಜೆಯ ಅಂಗವಾಗಿರುವದರಿಂದ ನೃತ್ಯಮಂಟಪ ದೇವಾಲಯದಲ್ಲಿದೆ. ಹೀಗೆ ನೃತ್ಯಮಂಟಪ ದೇವಾಲಯದಲ್ಲಿರುವುದು ವಿರಳವಾದರೂ ಪರಂಪರಾವಿರುದ್ಧವಲ್ಲ. ವರದಾ ನದಿಯನ್ನು ಉಲ್ಲೇಖಿಸದ ಆ ಗ್ರಂಥಕರ್ತೃನು ಅಲ್ಲಮನ ಕಾಲವಾದಮೇಲೆ ಕೇಳ್ಮೆಯಿಂದ ದೂರ ಕುಳಿತು ಬರೆದ ಅಂಶವಾದುದರಿಂದ, ಅಲ್ಲಮನನ್ನು ಮೋಹಿಸಲು ಯಾವಳೊ ಪ್ರಸಿದ್ಧ ದೇವದಾಸಿಯು ಪ್ರಯತ್ನಿಸಿ ಇಲ್ಲಿ ವಿಫಲೆಯಾದಳು — ಎಂಬಷ್ಟನ್ನು ತಥ್ಯವೆಂದು ಗ್ರಹಿಸಬಹುದು. ಪ್ರಸ್ತುತವೇನಂದರೆ, ಅಲ್ಲಮನ ಪಾದಧೂಳಿಗಳು ಈ ಮುಖಮಂಟಪದಲ್ಲಿ ಬಿದ್ದಿರುವುದರ ಮಹತ್ವ; ಮಧುಕೇಶ್ವರನು ಆತನಿಗೆ ಆತ್ಮಸ್ಥೈರ್ಯವನ್ನು ದಯಪಾಲಿಸಿದ ವಿಶೇಷವಾದ ಕಾರಣಿಕತೆ! ಅಲ್ಲಮನು ಬಸವಣ್ಣನ ಗುರು; ಆತನು ಮೋಕ್ಷಾಧಿಕವಾದ ಭಕ್ತಿಯನ್ನು ಪಂಚಮ ಪುರುಷಾರ್ಥವೆಂದು ಬೋಧಿಸಿದನೆಂದು ಕೆಲವರು ಹೇಳಿರುವುದು ನಿರಾಧಾರ. ಈ ನೃತ್ಯಮಂಟಪದ ಎತ್ತರ ೧೦೦ ಇಂಚು. ಉದ್ದ ಹಾಗೂ ಅಗಲ (ಪ್ರತಿಯೊಂದೂ) ೧೪೭ ಇಂಚು. ಇದರ ಒಂದೊಂದು ಸ್ತಂಭದ ನಡುವಿನ ಸುತ್ತಳತೆ ೬೨ ಇಂಚು. ಇವುಗಳ ಕಲೆಗಾರಿಕೆ ಮನೋಹರವಾಗಿದೆ. ಈ ೪ ವೃತ್ತಸ್ತಂಭಗಳು ಇತರ ಸ್ತಂಭಗಳಿಗಿಂತ ಹೆಚ್ಚು ಆಕರ್ಷಕವಾಗಿ ಎದ್ದು ಕಾಣುತ್ತವೆ.

ಈಶ್ವರ ದೇವಾಲಯವೆಂದ ಮೇಲೆ **ಬಸವ** ಇರಲೇ ಬೇಕು, ಇದ್ದಾನೆ. ಗುಡಿಯನ್ನು ಹೋಗುವಾಗ ಮುಖಮಂಟಪದ ಮುಖಸ್ಥಳದಲ್ಲಿ ಬಸವ ಕುಳಿತಿದ್ದಾನೆ. ಅವನ ( ಕುಳಿತ ಮಾನದಲ್ಲಿ ) ಎತ್ತರ

೮೭ ಇಂಚು, ಅಗಲ ೩೭ ಇಂಚು ಮತ್ತು ಉದ್ದ ೮೪ ಇಂಚು. ಈ ಮೂರ್ತಿಯ ಮೊಗದಲ್ಲಿ ಸಾತ್ವಿಕ ಕಳೆಯಿದೆ.

ದೇವಾಲಯದ ಹೆಬ್ಬಾಗಿಲೊಳ ಹೊಕ್ಕ ಕೂಡಲೇ ಎದುರಾಗುವ ಕಲ್ಲಿನ **ಧ್ವಜಸ್ತಂಭದ** ಎತ್ತರ ೪೦ ಅಡಿಗಳು. ಅದಕ್ಕೂ ಮುಖ ಮಂಟಪಕ್ಕೂ ನಡುವೆ ಇರುವ **ದೀಪಸ್ತಂಭದ** ಎತ್ತರ ೨೧ ಅಡಿಗಳು. ಕೆಲ ಶಾಸನ ಶಿಲೆಗಳನ್ನು ದೇವಾಲಯದ ಒಳಹೋಗುವ ಸಮ್ಮು ಎಡಗಡೆ ಜಾಟಿ ನಿಲ್ಲಿಸಿ ಇಡಲಾಗಿದೆ. ಇವು ಅಸಂಖ್ಯ ರಾಜ ಶಾಸನಗಳ ಅತ್ಯಲ್ಪಸಂಖ್ಯಾತ ಪ್ರತಿನಿಧಿಗಳಷ್ಟೇ!

**ಹೆಬ್ಬಾಗಿಲಾನೆಗಳು** ಮುದ್ದುಮರಿಗಳು. ಇವುಗಳು ಒಂದನ್ನೊಂದು ಅವಳಿಜವಳಿಗಳಂತೆ ಹೋಲುತ್ತವೆ. ದೇವಾಲಯದ ಹೊರಬಾಗಿಲ ಕಾವಲುಗಾರರಾಗಿವೆ— ಈ ಚಿಟ್ಟಾನೆ ಮರಿಗಳು! ಇಷ್ಟಲ್ಲದೇ, ಅಷ್ಟದಿಕ್ಪಾಲಕರ ಹೊರತಾಗಿ ದೇವಾಲಯದೊಳಗೆ (ಇಲ್ಲಿ ಹೇಳಿರುವ ಮೂರ್ತಿಗಳಲ್ಲದೆ) ಇನ್ನೂ ನಾಲ್ಕಾರು ವಿಗ್ರಹಗಳು ನೋಡಲು ಸಿಗುತ್ತವೆ. ಇವೆಲ್ಲವುಗಳ ಕಾಟಿಗೆ ನಿಂತ ಮರಿಯಾನೆಗಳ ಮಾದರಿಯ ಎತ್ತರ ೩೧ ಇಂಚು, ಅಗಲ ೧೭ ಇಂಚು, ಮತ್ತು ಉದ್ದ ೩೪ ಇಂಚು.

೨

ಮಧುಕೇಶ್ವರನ ಬಲಕ್ಕೆ **ಕದಂಬೇಶ್ವರ**; ಆತನ ದೇವತಾ ಕದಂಬವನ್ನು ಅವನ ಆಲಯದ ಹೊರಗೆನಿಂತು ಸಲಹುವ ಮತ್ತೊಂದು ಈಶ್ವರಾವತಾರ! ಕದಂಬರಿಗೆ ೨೮೦ ರಿಂದ ೧೩೪೭ರ ವರೆಗೆ ಭಕ್ತಿ ಕೇಂದ್ರವಾಗಿದ್ದ ಬನವಾಸಿಯ ರಾಜ್ಯ ಶಕ್ತಿಯ ಪ್ರತೀಕ, ಈ ಕದಂಬ ಲಿಂಗ. ಪೀಠ ಸಹಿತ ಲಿಂಗದ ಎತ್ತರ ೮೦ ಇಂಚು, ಅಗಲ ೭೧ ಇಂಚು ಮತ್ತು ಲಿಂಗಮಾತ್ರದ ಸುತ್ತಳತೆ ೭೧ ಇಂಚು ಹಾಗೂ ಎತ್ತರ ೨೮ ಇಂಚು. ಕದಂಬದ (ಜನಪ್ರಿಯಾರ್ಥದ ವನೆ ಅಥವಾ ತಾಳೆ ಮರದ) ಔನ್ನತ್ಯವನ್ನು ಈ ಕದಂಬೇಶ್ವರ ಸಂಕೇತಿಸಿದ್ದಾನೆ! ಈತ ನಿಜವಾಗಿ ಮಹಾಬಲ!

೩

ಅನಂತರ ಮಧುಕೇಶ್ವರನ (ಗುಡಿಯ) ಬಲಕ್ಕೆ ಅವನ ಗುಡಿಗೂ ಕದಂಬೇಶ್ವರನ ಗುಡಿಗೂ ನಡುವೆ **ಶಿತಿಕಂಠೇಶ್ವರ** (ಲಿಂಗದ) ದೇವಾಲಯವಿದೆ. ಇದರ ಗೋಪುರದ ಕಲಶ ಹಾಳಾಗಿ ಹೋಗಿದೆ. ಕಲಶವನ್ನು ಶಿಲಾಕಮಲವೊಂದರ ಮೇಲೆ ನಿಲ್ಲಿಸಿದ್ದರ ಕುರುಹು ಉಳಿದಿದೆ. ಈ ಚಚ್ಚೌಕವಾದ ಗುಡಿಯ ಗೋಪುರದಲ್ಲಿ ನಾಲ್ಕು ಬೆರಳೆಗೊಂದರಂತೆ ನಾಲ್ಕು ಬದಿಗಳಲ್ಲೂ ಮೆಟ್ಟಿಲುಗಳ ಸಾಲುಗಳಿರುವುದು ಇದರ ಕದಂಬ ವೈಶಿಷ್ಟ್ಯ. ಗೋಪುರದ ಪ್ರಾಚೀನತೆ ಊಹ್ಯ. ಈ ಗುಡಿಯ ಮುಂದೆ ಮಧುಕೇಶ್ವರನ **ಮಹಾರಥ**ವಿದೆ, ಈ ರಥವನ್ನು ಸುಧಾಪುರದ ದೊರೆ ರಾಮಚಂದ್ರನಾಯಕನು ೧೬೦೮ರಲ್ಲಿ ದೇವರಿಗೆ ಮಾಡಿಸಿಕೊಟ್ಟದ್ದು. ಇದಕ್ಕೆ ೧೦ ಅಡಿ ಎತ್ತರದ (ವ್ಯಾಸದ) ೪ ಗಾಲಿಗಳು, ನಡುವೆ ೮ ಅಡಿ ಎತ್ತರದ (ವ್ಯಾಸದ) ೨ ಗಾಲಿಗಳು : ಹೀಗೆ ೬ ಗಾಲಿಗಳನ್ನೊಳಗೊಂಡ ೨೦ ಅಡಿ ಉದ್ದಗಲ, ೨೨ ಅಡಿ ಎತ್ತರವುಳ್ಳ ಈ ರಥವು ಬಹಳ ಭವ್ಯಾಕೃತಿಯುಳ್ಳದ್ದಾಗಿದೆ. ಗಾಲಿಗಳನ್ನೂ ಅಚ್ಚುಗಳನ್ನೂ ಬಿಟ್ಟು ಮಿಕ್ಕ ಇಡೀ ರಥವು ಗಂಧದ ಮರದ ತುಂಡುಗಳಿಂದ ಮಾಡಲ್ಪಟ್ಟದ್ದು ಎಂದು ಕೆಲ ಸಾಂಪ್ರದಾಯಕರ ಮತ. ತೇರ ಜಾತ್ರೆಯು ಚೈತ್ರಶುದ್ಧ ಮಘಾ ನಕ್ಷತ್ರದ ಶುಭಮುಹೂರ್ತದಲ್ಲಿ ನಡೆಯುತ್ತದೆ. ೧೯೦೦ರ ವರೆಗೆ ಶೃಂಗೇರಿ ಮಠದ ೨ ಆನೆಗಳು ಬಂದು ಈ ತೇರನ್ನು ಎಳೆಯುತ್ತಿದ್ದುವು. ಇದೀಗ ಏಳು ನೆಲೆಯ ತೇರು; ಮೊದಲು ೯ ನೆಲೆಗಳಿದ್ದುವಂತೆ.

೪

ಅನಂತರ ಮಧುಕೇಶ್ವರ ದೇವಾಲಯವನ್ನು ಹೋಗುವಾಗ ಎಡಕ್ಕೆ ವಿಜಯನಗರದ ೧ನೆಯ ಬುಕ್ಕ ಭೂಪಾಲನ ಮಂತ್ರಿಯಾಗಿ ಅವನ ತಮ್ಮ ಮಾರಪ್ಪನಿಗೆ ಸಹಾಯಕನಾಗಿ ಚಂದ್ರಗುತ್ತಿಯಿಂದಾಳುತ್ತಿದ್ದ ಮಾಧವ ಮಂತ್ರಿಯ ಕೆಳಗಿನ ಅಧಿಕಾರಿಯಾದ ಅಹೋಬಲನಾಥನು ಪುನರುಜ್ಜೀವಿಸಿದ **ತಿರುಮಲೇಶ್ವರ** (ವೆಂಕಟೇಶ್ವರ) ದೇವ

ಸ್ಥಾನವಿದೆ. ಅತನು ೧೩೬೮ರಲ್ಲಿ ಬರೆಯಿಸಿದ ಶಿಲಾಶಾಸನವನ್ನು ನಾವಿಲ್ಲಿ ನೋಡಬಹುದು. ಇದು * ಮಧುಕೇಶ್ವರ ದೇವರ ಕಾರಣಿಕತೆಯೂ ವಿಜಯನಗರದ ಆದಿಯ ಅಳರಸರ ಮನ್ನಣೆಗೆ ಪಾತ್ರವಾಗಿತ್ತೆಂಬುದನ್ನು ಸೂಚಿಸುತ್ತದೆ.

ಮಧುಕೇಶ್ವರ ದೇವಾಲಯದ ಹೊರವಲಯದಲ್ಲಿ ಉತ್ತರದ್ವಾರವೆಂದು ಕರೆಯಲ್ಪಡುವ 'ಸುಟ್ಟುಪ್ಪರಿಗೆ'ಯ ಕೆಳಗಡೆ ಕದಂಬಸಿಂಹಗಳನ್ನೂ ವಿಶಿಷ್ಟ ಕಲೆಗೆಲಸದ ಕಿಟಕಿಗಳನ್ನೂ ನೋಡಬಹುದು ಎನ್ನುತ್ತಾನೆ ಮೋರೆಸ್. ಅಲ್ಲಿಂದ ಪೂರ್ವ ದಿಕ್ಕಿನಲ್ಲಿರುವ ಶ್ರೀ ಮ. ಜ. ಒಡೆಯರ ಪ್ರಾಚೀನ ಪರಂಪರಾಗತ ಹಿತ್ತಲಿನಲ್ಲಿ ಹಳೆಯ ಅರಮನೆಯ ಗಜ ತುರಗ ಶಾಲೆಗಳ ಅವಶೇಷಗಳು ದೊರಕಿರುವದರಿಂದ ಆ ಅಪರಣದಲ್ಲೇ ಕದಂಬ ಚಕ್ರೇಶ ಪೀಠವಿದ್ದಿರಬಹುದೆಂದು ವಿದ್ವಾಂಸರು ತರ್ಕಿಸಿದ್ದಾರೆ. ಉತ್ತರ ದ್ವಾರವು ಹಳೆಯ ಮಧುಕೇಶ್ವರ ಮಂದಿರದ ಪ್ರವೇಶದ್ವಾರದ ಅವಶೇಷ. ಇತ್ತೀಚೆಗೆ ಪ್ರಾಚ್ಯ ಉತ್ಖನನ ಶಾಖೆಗೆ ಕದಂಬ ವಂಶಾವಳಿಯುಳ್ಳ ಸ್ತಂಭವೊಂದು ಸಿಕ್ಕಿದೆ. ಬನವಾಸಿಯ ಸಮೀಪ ಗುಡ್ನಾಪುರದಲ್ಲಿ ಕದಂಬ ರವಿವರ್ಮನ ಶಾಸನವಿರುವ ೨೦ ಅಡಿ ಎತ್ತರದ ಸ್ತಂಭವನ್ನು ಕನ್ನಡ ಸಂಶೋಧನ ಸಂಸ್ಥೆಯ ಡಾ॥ ಗೋಪಾಲ ಕಂಡುಹಿಡಿದಿದ್ದಾರೆ.

೫

ಅಲ್ಲಿಂದ ಮುಂದೆ ವಿಭೂತಿಗೌರಯ್ಯ ಅಥವಾ ಗೌರಾರ್ಯನು (೧೨೬೦) ಬಂದಾಗ ಸ್ಥಾಪಿಸಲ್ಪಟ್ಟದ್ದೆಂದು ಐತಿಹ್ಯವಿರುವ ವೀರಶೈವ ಪರಂಪರೆಯ ಶ್ರೀಮನ್ನಿರಂಜನ ಪ್ರಣವಸ್ವರೂಪ ರುದ್ರಸ್ವಾಮಿಗಳ **ಗದ್ದುಗೆ** (ಪ್ರಸಾರಚಿತ್ರ ರೂಪದಲ್ಲಿ) ಕಾಣಸಿಗುತ್ತದೆ. ಅಮೇಲೆ ಸ್ವಲ್ಪ ದೂರದಲ್ಲಿ ಲನೆಯ ತೀರ್ಥಂಕರರಾದ ಚಂದ್ರಪ್ರಭಸ್ವಾಮಿಗಳ **ಬಸದಿ** ಸಿಗುತ್ತದೆ. ಅವರದ್ದು ಅಪೂರ್ವ ಶಿಲಾವಿಗ್ರಹ. ಈ ವಿಗ್ರಹದ ಗರ್ಭಗುಡಿಯ ಎದುರುಗೋಡೆಯ ಹೊರಭಾಗದಲ್ಲಿ ನಮ್ಮ ಎಡಕ್ಕೆ ವೃಷಭ

* ಶಾಸನದಲ್ಲಿ ಇದು "ಗೋಪಿನಾಥ" ದೇವಾಲಯ.

ತೀರ್ಥಂಕರರ ವಿಗ್ರಹವಿದೆ : ಎತ್ತರ ೫೪ ಇಂಚು, ಅಗಲ ೨೫ ಇಂಚು ಬಲಗಡೆ ಪ್ರಿಷ್ಮದೇವರು : ಎತ್ತರ ೨೪ ಇಂಚು, ಅಗಲ ೧೩ ಇಂಚು. ಚಂದ್ರಪ್ರಭ ಸ್ವಾಮಿಗಳ ವಿಗ್ರಹದ ಕೆಳಗೆ ಅಷ್ಟೇ ಚಿಕ್ಕದಾದ ಪದ್ಮಾವತಿಯ ಮೂರ್ತಿಯಿದೆ. ಪದ್ಮಾವತಿಯು ಅವರ ಸೇವಿಕೆಯಾದ ಯಕ್ಷಿಣಿ—ಜೈನರ ಪ್ರಕಾರ. ಈ ಬಸದಿಯ ಹಿತ್ತಿಲಲ್ಲಿ ಅರ್ಹಂತಿ ಹೋಗಪ್ಪೆಯ ಸಮಾಧಿಶಿಲೆಯಿದೆ; ಅದರ ಹತ್ತಿರ ಒಂದು ಶಾಸನಾಂಕಿತ ಶಿಲೆಯೂ ಇದೆ. ಇದು ಬನವಾಸಿ ಆಳರಸರ "ಸೆಕ್ಯೂಲಾರಿಸಮ್ಮಿಗೆ" ನಿದರ್ಶನ.

ಆಮೇಲೆ ಸುಮಾರು ೪ ಫರ್ಲಾಂಗು ದೂರದಲ್ಲಿ **ಆದಿ ಮಧು ಕೇಶ್ವರ** ದೇವಾಲಯ ತೋರುತ್ತದೆ. ಇದರ ಗೋಪುರದ ಲಕ್ಷಣ ಕದಂಬಶೈಲಿಯನ್ನು ನೆನಪಿಗೆ ತಂದುಕೊಡುತ್ತದೆ. ಚಿಕ್ಕದಾದರೂ ಇದು ಚೊಕ್ಕವಾದ ದೇವಾಲಯ. ಇದರ ಸಮೀಪದಲ್ಲಿ ವಸಿಷ್ಠತೀರ್ಥ ವೆಂಬ ವೇದಕಾಲೀನ ಕೊಳವಿದೆ. ಅದರ ಪ್ರಾಚೀನತೆಗೆ ಅದರ ಆವರಣವೂ, ಸ್ವರೂಪವೂ, ಅದರ ಒಂದು ದಂಡೆಯ ಮೇಲಿನ ಗಡುತರ ವಾದ ಬೋಳು ಮರವೂ ಸಾಕ್ಷಿಗಳಾಗಿವೆ. ವಸಿಷ್ಠನಿಗೆ ಯಾರದೋ ಶಾಪ ಬಂದಾಗ ಇಲ್ಲಿ ತಪಸ್ಸನ್ನು ಮಾಡಿ ಅವನು ಅದರಿಂದ ಮುಕ್ತ ನಾದನೆಂದು ಐತಿಹ್ಯ. ಈ ಕೆರೆಯು ರಮಣೀಯತೆ ರುದ್ರವಾಗಿದೆ. ಇತ್ತೀಚೆಗೆ ಆ ಬೋಳುಮರ ಸತ್ತುಹೋಗಿದೆ.

೭

ಬನವಾಸಿ ಪಟ್ಟಣದ ಮಧ್ಯಹೊಕ್ಕರೆ ಅಳಿದುಳಿದ **ಅಲ್ಲಮ ಪ್ರಭುಲಿಂಗ** ದೇವಾಲಯ ದೊರಕುತ್ತದೆ. ಲಿಂಗದ ಸುತ್ತು ೩೭ ಇಂಚು, ಎತ್ತರ ೧೫ ಇಂಚು, ಪೀಠ ಸಹಿತ ಲಿಂಗದ ಎತ್ತರ ೩೮ ಇಂಚು. ಪೀಠದ ಆಕಾರ ಚಚ್ಚೌಕ; ಅದರ ಒಂದು ಮೈಯ ಅಗಲ ೭೭ ಇಂಚು. ಆಮೇಲೆ **ಪ್ರಭುಲಿಂಗ ದೇಗುಲ**ದೆದುರು ನಿಂತರೆ ಬಲ ಮೂಲೆಯಲ್ಲಿ ಸಾರ್ವಭೌಮ ದುರ್ಗದ ಅವಶೇಷವಾದ ಬೃಹ

ಡಾಕಾರದ ದಿಬ್ಬಗಳ ಸಾಲು ಕಣ್ಣಿಗೆದುರಾಗುತ್ತದೆ. ಈ ದೇವಾಲಯದ ಗೋಪುರವು ಪಾಳ್ಯಯಾಗಿದೆ. ಅನತಿದೂರ ನಡೆದಾಗ ನಮಗೆ **ವೃಷಭಾಲಯವು** ಕಾಣಿಸುತ್ತದೆ. ಇದು ಪೂರ್ಣವಾಗಿ ಹೊಸ ರಚನೆ; ಬಸವವಿಗ್ರಹವಷ್ಟೇ ಹಳೆಯದು, ಬಸವೇಶ್ವರನ ಕಾಲ ೧೧೬೦. ಅಲ್ಲಮ ಬಂದಿದ್ದ ಊರಿಗೆ ಬಸವಣ್ಣ ಕೂಡ ಬಂದು ಹೋಗಿದ್ದರೆ ಏನೂ ಆಶ್ಚರ್ಯವಿಲ್ಲ! ಬಳ್ಳಿಗಾವೆಯಲ್ಲಿ ಜನಿಸಿದ ಅಲ್ಲಮನು ಬಸವಣ್ಣನ ಗುರು. ಬಳ್ಳಿಗಾವೆ ಶಿರಾಳಕೊಪ್ಪದ ಸಮೀಪದಲ್ಲಿದೆ.

೮

## ಬನವಾಸಿಯ ಆನುವಂಶಿಕ ರಾಜಧಾನಿಪದ

ಬನವಾಸಿಯನ್ನು ಮೊದಲಿಂದ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದವರು ಚುಟುಗಳು ಮತ್ತು ಕದಂಬರು. ಚುಟುಗಾಲ ಕ್ರಿ. ಶ. ೨೦೦. ಕದಂಬ ಚಕ್ರವರ್ತಿಗಳ ಮತ್ತು ಇಬ್ಬರು ಸಾಮಂತರ ಕಾಲ ಕ್ರಿ. ಶ. ೨೮೦–೬೫೫. ಆಮೇಲೆ ಇಲ್ಲಿ ರಾಷ್ಟ್ರಕೂಟರ ಸಾಹಸ್ರ-ತುಂಗ, ದಂತಿದುರ್ಗನ ( ೭೫೩–೭೫೬ ) ಮೇಲ್ತೊರೆತನದಲ್ಲಿ ಕದಂಬ ವಂಶದ ಜಕ್ಕಿಯಬ್ಬೆ ಎಂಬ ಮಹಾರಾಣಿ ಆಳಿದಳು. ಅನಂತರ ಅವಳ ಅಳಿಯ ಷಷ್ಟ (ಚಟ್ಟ) ದೇವ ಆಳಿದ. ಅವನ ಮುಂದಿನ ಕೆಲ ಕದಂಬರ ಹೆಸರುಗಳು ಸಿಕ್ಕಿಲ್ಲ. ಅನಂತರ ಇಂದ್ರವರ್ಮ ಕದಂಬನೂ ( ೮೫೫–೮೯೦ ) ಅವನ ಮಗ ಅಜ ( ಅಯ್ಯ ) ವರ್ಮ ಕದಂಬನೂ ( ೮೯೦–೯೧೧ ) ಬನವಾಸಿ ರಾಜಧಾನಿಯಿಂದ ರಾ. ಕೂ ನೃಪತುಂಗ ಅಮೋಘವರ್ಷನ (೮೧೪–೮೮೦) ಮತ್ತು ೨ನೆಯ ಕೃಷ್ಣಶುಭತುಂಗ ಅಕಾಲವರ್ಷನ ( ೮೮೦–೯೧೨ ) ಮೇಲ್ತೊರೆತನದಲ್ಲಿ ಅನುಕ್ರಮವಾಗಿ ಮಲೆನಾಡನ್ನು ಆಳಿದರು. ಮತ್ತೆ ಕೆಲ ಕದಂಬರ ವೃತ್ತಾಂತ ಅಲಭ್ಯ. ಆಮೇಲೆ ಮಾರಸಿಂಹ ಗಂಗನ ಕೂಡಲೂರು ದತ್ತಿಶಾಸನದ ಪ್ರಕಾರ ಇಲ್ಲಿ ೩ನೆಯ ಅಜವರ್ಮ ಕದಂಬ ಆಳುತ್ತಿದ್ದ. ಕ್ರಿ. ಶ. ೯೫೯ರಲ್ಲಿ ೨ನೆಯ ರವಿವರ್ಮ ಕದಂಬನೂ ೯೬೩ರಲ್ಲಿ ಬೊಪ್ಪವ್ವೆ ಕದಂಬೆಯೂ

ಬನವಾಸಿ ಸಿಂಹಾಸನಾಸೀನರಾಗಿದ್ದರು. ಈ ಅಜವರ್ಮ ಪಂಪ ಸಮಕಾಲೀನ.

ಅನಂತರ ಇರಿವಬೆಡಂಗದೇವ ಕದಂಬರಾಯನು * (೯೬೭-೯೮೦) ಕದಂಬ ರಾಜಧಾನಿಯನ್ನು ಹಾನುಗಲ್ಲಿಗೆ ಸ್ಥಳಾಂತರಿಸಿದ. ಆದರೂ ಬನವಾಸಿ ಉಪರಾಜಧಾನಿಯಾಗಿ ಉಳಿದಿತ್ತು. ಆಮೇಲೆ ಅದೇ ವಂಶದ ಕೀರ್ತಿವರ್ಮ ಕದಂಬನೆಂಬ ಮಹಾಮಂಡಲೇಶ್ವರನು (೧೦೭೫-೧೧೧೭) ಚಾಲುಕ್ಯರ ೧ನೆಯ ಸೋಮೇಶ್ವರನ ಸಾರ್ವಭೌಮತ್ವದಲ್ಲಿ ಬನವಾಸಿಯನ್ನು ತನ್ನ ಪ್ರತ್ಯೇಕವೂ ಸ್ವತಂತ್ರವೂ ಆದ ರಾಜಧಾನಿಯನ್ನಾಗಿ ಮಾಡಿಕೊಂಡು ಬನವಾಸಿ (ಮಂಡಲ) ಹನ್ನೆರಡು ಸಾವಿರದ ನಾಡನ್ನು ಆಳಿದನು. ಉಪಲಬ್ಧ ಐತಿಹಾಸಿಕ ದಾಖಲೆಗಳಲ್ಲಿ ೧೧೧೭ರ ಬಳಿಕ ಬನವಾಸಿ ರಾಜಧಾನಿಯಾಗಿ ಮುಂದೆ ಎಷ್ಟು ಕಾಲ ಉಳಿಯಿತೆಂಬುದಾಗಲಿ, ಇಲ್ಲಿಯ ಕದಂಬ ಸಿಂಹಾಸನದ ಕತೆಯೇನೆಂಬುದಾಗಲಿ ತಿಳಿದು ಬರುವದಿಲ್ಲ. ವಿಜಯನಗರದ ಚಕ್ರವರ್ತಿಗಳಿಗೆ ಚಂದ್ರಗುತ್ತಿ ಉಪರಾಜಧಾನಿಯಾಯಿತಲ್ಲದೆ ಬನವಾಸಿ ಅಲ್ಲ. ಅವರ ಆಳಿಕೆಯಾರಂಭ ೧೩೪೭ರಿಂದ: ಅಲ್ಲಿಯವರೆಗೆ ಹಾನುಗಲ್ಲಿನಿಂದಾಳುತ್ತಿದ್ದ ಕದಂಬರ ರಾಜ್ಯಭಾರಕ್ಕೆ ಬನವಾಸಿ ಸೇರಿತ್ತು. ಆದುದರಿಂದ ೧೨ನೆಯ ಶತಮಾನದಿಂದ ೧೪ರ ವರೆಗೆ ಅವಶೇಷ ರೂಪದಲ್ಲಾದರೂ ಅರಮನೆ ಇದ್ದಿರಬಹುದಾಗಿದೆ. ೧೩೧೭ರ ಬಳಿಕ ಬಹುಶಃ ಅದು ನಿಃಶೇಷವಾಗಿರಬೇಕು: ಮಲ್ಲಿಕ್ ಕಾಫರನು ಹಾನುಗಲ್ಲನ್ನು ನಿಃಶೇಷಗೊಳಿಸಿದಾಗಲೇ ಬನವಾಸಿಯ ರಾಜಸಂಪತ್ತನ್ನೂ ನಿರ್ಮೂಲಗೊಳಿಸಿರಬೇಕು !

---

* ಈ ಶಾಸನವನ್ನು ಸರಿಯಾಗಿ ಓದಲಾಗುವದಿಲ್ಲವೆಂದು ಡಾ. ಬಿ. ಆರ್. ಗೋಪಾಲ್ ಹೇಳುತ್ತಾರೆ. ಆದರೆ ಅದನ್ನು ಓದಲು ತಜ್ಞರು ಹೊಸ ಪ್ರಯತ್ನ ಮಾಡಿದರೆ ಡಾ. ಮೋರಿಸ್ಸರ ಮತ ಸುಸ್ಥಿರವಾಗುತ್ತದೆ.

೯

## ಮೂರ್ತಿಶಿಲ್ಪದ ಮೂಲ

ಎದುರಿನ ಭಾಗ ಮಾತ್ರ ಇರುವ ವಿಗ್ರಹ ಅರ್ಧ ಚಿತ್ರ; ಇಡಿ ಇರುವದು ಪೂರ್ಣ ಚಿತ್ರ. ವಿಗ್ರಹ ಜೀವಂತವಾಗಿ ತೋರುವದು ಉತ್ತಮ ಕಲೆಗಾರಿಕೆ. ಅದರ ಸುತ್ತ ಕೆಲವೊಮ್ಮೆ ಮಾನವೇತರ ಜೀವಿಗಳ ಚಿತ್ರಪಟ್ಟಿಕೆ ಇರುವದುಂಟು. ವಿಜಯನಗರ ಕಾಲದ ಕೆತ್ತನೆಯು ಕೆಲಸದಲ್ಲಿ ಮಾತ್ರ ಜೀವಕಳೆ ಕಡಿಮೆಯಂತೆ. ಗೋಡೆಗಳ ಮೇಲಿನ ಚಿತ್ರಗಳನ್ನು ಚಿತ್ರಭಾಸಗಳು ಎನ್ನುತ್ತಾರೆ. ವಿಗ್ರಹವು ಚೂಡಾಮಣಿ, ಮಕರ ಕುಂಡಲ, ಹಾರ, ವಲಯ, ಮೇಖಲೆ ನೂಪುರ, ಪದಸಾರಗಳಿಂದ ಲಿಂಗಸಹಜವಾಗಿ ಅಲಂಕೃತವಾಗಿರಬಹುದು.

ವಿಗ್ರಹಗಳ ಬಗೆ ಮೂರು: ಅವ್ಯಕ್ತ (ಸಾಲಿಗ್ರಾಮದಂತೆ ಇಲ್ಲವೆ ಲಿಂಗದಂತೆ), ವ್ಯಕ್ತಾವ್ಯಕ್ತ (ಎಲಿಫಂಟಾಗವಿಯ ತ್ರಿಮೂರ್ತಿ ವಿಗ್ರಹ, ಗುಡಿಮಲ್ಲಲಿಂಗ ಮೊದಲಾದ ಮುಖಲಿಂಗಗಳಂತೆ) ಮತ್ತು ವ್ಯಕ್ತ (ಇಡಿ ಆಕಾರ) ಅಚಲ ಮೂರ್ತಿಗಳು ಧ್ರುವಬೇರಗಳು; ಸುಲಭವಾಗಿ ಎತ್ತಿ ಇಡಬಲ್ಲವು ಚಲವಿಗ್ರಹಗಳು ಮತ್ತು ಎರಡಕ್ಕೂ ನಡುವಿನ ತೂಕ ಉಳ್ಳಂಥವು ಚಲಾಚಲಗಳು ಉತ್ಸವ ಮೂರ್ತಿ ಉತ್ಸವಬೇರ, ಬಲಿ ಹಾಕುವಾಗಿನ ಮೂರ್ತಿ ಬಲಿಬೇರ, ಅಭಿಷೇಜ್ಯವು ಸ್ನಾಪನಬೇರ; ಅಚಲ ವಿಗ್ರಹಗಳಲ್ಲಿ ಸ್ಥಾನಕ, ಆಸನ ಮತ್ತು ಶಯನ ಎಂದು ತ್ರಿವಿಧ.

ಚತುರ, ಲಲಿತ, ಕಟಿಸಮ, ಭುಜಂಗತ್ರಸಿತ, ಊರ್ಧ್ವ ಮತ್ತು ತಲಸಂಸ್ಫೋಟಿತ ಎಂಬ ೬ ನೃತ್ತ ಭಂಗಿಗಳು.

ವಜ್ರ, ಶಕ್ತಿ, ಪಾಶ, ಅಂಕುಶ, ಗದೆ, ತ್ರಿಶೂಲ, ಚಕ್ರ, ಶಂಕ ಮುಂತಾದವು ಆಯುಧಗಳು

ಕಿನ್ನರ, ಯಕ್ಷ, ವಸು, ನಾಗ, ಸಾಧ್ಯ, ಅಸುರ, ಅಪ್ಸರೆ, ಪಿಶಾಚ ವೇತಾಳ, ಪಿತೃ, ಋಷಿ, ಗಂಧರ್ವ, ಮರುದ್ಗಣಗಳು ಪರಿವಾರಗಳು.

**ಬಿ. ಎಚ್. ಶ್ರೀ. ಮತ್ತು ಎಲ್. ಟಿ. ಶರ್ಮಾ**

## ೯ ನೆಯ ರವಿವರ್ಮ ಕದಂಬನ ಕೋರವಾಂಗಲ ದತ್ತಿಶಾಸನ

( ೪೯೭-೫೩೭ )

ಸೂರ್ಯಾಂಶು ದ್ಯುತಿಪರಿಷಿಕ್ತಪಂಕಜಾನಾಂ
ಶೋಭಾಂ ಯದ್ವಹತಿ ಸದಾಸ್ಯ ಪಾದಪದ್ಮಂ ।
ದೇವಾನಾಂ ಮಕುಟಮಣಿಪ್ರಭಾಭಿಷಿಕ್ತಂ
ಸರ್ವಜ್ಞಃ ಸ ಜಯತಿ ಸರ್ವಲೋಕನಾಥಃ ॥

. . . . . . . . . . .

ಕದಂಬಾಮಲವಂಶಾದ್ರೇರ್ಮೌಳಿತಾಮಾಥಗತೋರವಿಃ ॥
ನೃಪಃ ಛಲಸಕೀ ವಿಷ್ಣುರ್ದೈತ್ಯಜಿಷ್ಣುರಯಂ ಸ್ವಯಂ ।
ಹಿರಣ್ಮಯ ಚಲಸ್ಮಾಲಾಂ ತ್ಯಕ್ತ್ವಾ ಚಕ್ರಂ ವಿಭಾವಿತಃ ॥
ಸಾಮ್ರಾಜ್ಯೇನಂದಮಾನೋಽಹಿನ ಮಾದ್ಯತಿ ಪರಂತಪಃ ।
ಶ್ರೀರೇಷಾಮುದಯತ್ಯಸ್ಯಾಸತಿ ಪೀತೇವ ವಾರುಣೀ ॥

* **ನರ್ಮದಾಂತಂ ಮಹೀ** ಪ್ರೀತ್ಯಾ
ಯಮಾಶ್ರಿತ್ಯಾಭಿನಂದತಿ ।
ಕೌಸ್ತುಭಾಭಾರುಣಚ್ಛಾಯಾ ವಕ್ಷೋ
ಲಕ್ಷ್ಮೀರ್ಹರೇ ರಿವ ॥

**ರೇವಾವಧಿ ಜಯಂತೀಯಂ**
ಸುರೇಂದ್ರನಗರೀಂ ಶ್ರಿಯಾ ।
ವೈಜಯಂತೀ ಚಲಚ್ಚಿತ್ರ ವೈಜಯಂತೀ ವಿರಾಜತೇ ॥
ರಮೇರ್ಘ್ನಜಾಂ ಗದಾಸೀವ ಚಂದನಪ್ರೀತಮಾನಸಾ ।
ತಥಾಶ್ರೀರ್ನಾಭವತ್ ಪ್ರೀತಾ ಮುರಾರೇರಪಿ ವಕ್ಷಸಿ ॥

---

* ನರ್ಮದೆಯಿಂದ ಶರಾವತಿಯ ಹಾಗೂ ಕಾವೇರಿಯ ವರೆಗಿನ ನಾಡು ಮೊದಲು "ಕುಂತಳ" ವೆಂದೂ ಕದಂಬ ಕಾಕುತ್ಸ್ಥವರ್ಮನ ಕಾಲದಲ್ಲಿ "ಕರ್ನಾಟ" ವೆಂದೂ ಪ್ರಸಿದ್ಧವಾಗುತ್ತ ಬಂತು.

ವಿಶ್ವಾಸುಮತೀ ನಾಥನ್ ನಾಥತೇ ನಯಕೋವಿದಂ ।
ವೈರಿವೇಂದ್ರಂ ಜ್ವಲದ್ ವಜ್ರದೀಪ್ತಿ ಕೋರಕಿತಾಂಗದಂ ।
ಯಸ್ಯ ಮೂರ್ಧ್ನಿ ಸ್ವಯಂ ಲಕ್ಷ್ಮೀ ಹೇಮಕುಂಭೋದರಚ್ಯುತೈಃ ।
ರಾಜ್ಯಾಭಿಷೇಕಮಕರೋದಂಭೋಜಶಬಲೈರ್ಜಲೈಃ ॥

ರಘುಣಾಲಂಜಿತಾ **ಪೊಳೀ ಕುಂಡೇ** * ಗಿರಿರಧಾರಯತ್
ರವೇರಾಜ್ಞಾಂ ವಹತ್ಯದ್ಯ ಮಾಲಾಮಿವ ಮಹೀಧರಃ ॥

ಧರ್ಮಾರ್ಥಂ ಹರಿದತ್ತೇನ ಸೋಯಂ ವಿಜ್ಞಾಪಿತೋ ನೃಪಃ ॥
ಸ್ಮಿತಜ್ಯೋತ್ಸ್ನಾಭಿಷಿಕ್ತೇನ ವಚಸಾ ಪ್ರತ್ಯಭಾಷತ ॥

ಚತುಸ್ತ್ರಿಂಶತ್ತಮೇ ಶ್ರೀಮದ್ರಾಜ್ಯವೃದ್ಧಿ ಸಮಾ ಸಮಾ ।
ಮಧುಮಾಸಸ್ತಿಥಿಃ ಪುಣ್ಯಾ ಶುಕ್ಲಪಕ್ಷಶ್ಚ ರೋಹಿಣೀ ॥

ಯದಾ ತದಾ ಮಹಾಬಾಹುರಾಸಂದ್ಯಾಮಪರಾಜಿತಃ ।
§ ಸಿದ್ಧಾಯತನಪೂಜಾರ್ಥಂ ಸಂಘಸ್ಯಪರಿವೃದ್ಧಯೆ ॥
........................ ವೇ ಟಿಕಾಟೇ ತ್ರಿನಿವರ್ತನಂ ।
ಉಂಭಾದಿ ಪರಿಹರ್ತವ್ಯೇ ಸಮಾಧಿಸಹಿತಂ ಹಿತಂ ।
ದತ್ತವಾನ್ ಶ್ರೀಮಹಾರಾಜಃ ಸರ್ವಸಾಮಂತ ಸನ್ನಿಧೌ ॥



---

* "ಪೊಳೀ ಕುಂಡ" ವೆಂದು ಡಾ. ಶ್ರೀಕಂಠ ಶಾಸ್ತ್ರಿಗಳು ಹೇಳುತ್ತಾರೆ; ಆದರೆ ವ್ಯಾಕರಣಾನುಸಾರವಾಗಿ "ಉಳೀಕುಂಡ" ವೆಂದು ಅದನ್ನು ಬಿಡಿಸಬೇಕಾಗುತ್ತದೆ. ಆ ಹೆಸರಿನ ಗುಡ್ಡವಿನ್ನೂ ಸಂಶೋಧಿಸಲ್ಪಟ್ಟಿಲ್ಲ.

§ ಈ ದತ್ತಿಯು ಸಿದ್ಧರ (ಭಿಕ್ಷುಗಳ) ಮಠದ ಪೂಜೆಗಾಗಿ ಸಂಘಕ್ಕೆ (ಬೌದ್ಧ ಸಂಘಕ್ಕೆ) ಕೊಟ್ಟದ್ದು, ಕ್ರಿ. ಶ. ೫೫೦ ರ ವರೆಗೆ ಬೌದ್ಧ ಭಿಕ್ಷುಗಳು ಬನವಾಸಿಯಲ್ಲಿದ್ದವಕ್ಕಿದು ಸಾಕ್ಷಿ.

## ಪರಿಶಿಷ್ಟ ೧

# ಬನವಾಸಿಯ ಪ್ರಾಚೀನೇತಿಹಾಸ

ಕ್ರಿ. ಶ. ೩ನೆಯ ಶತಮಾನದ ಮಧ್ಯಭಾಗದಲ್ಲಿ ಬಳ್ಳಾರಿ ಮೂಲದ ಆಂಧ್ರ (ಶಾಲಿವಾಹನರ ಅಥವಾ ಶಾತವಾಹನರ) ಚಕ್ರಾಧಿಪತ್ಯವು ದಕ್ಷಿಣಪಥದಲ್ಲಿ ಒಡೆದು ಹೋದಮೇಲೆ ಅದರ ವಿವಿಧ ಭಾಗಗಳಿಗೆ ಶಾಲಿವಾಹನರ ಸಾಮಂತರಾಗಿದ್ದ ಇಕ್ಷ್ವಾಕುಗಳು, ಚುಟುಗಳು, ಪಲ್ಲವರು ಮತ್ತು ಕದಂಬರು ಉತ್ತರಾಧಿಕಾರಿಗಳಾದರೆಂಬುದು ಪ್ರಸಿದ್ಧ. ಶಾಲಿವಾಹನರು ಅಶೋಕ ಚಕ್ರವರ್ತಿಯ ಸಾಮ್ರಾಜ್ಯ ಒಡೆದು ಹೋಗುವವರೆಗೆ ಅವನ ಸಾಮಂತರಾಗಿದ್ದರು. ಕ್ರಿ. ಶ. ೨೫೦ರ ವರೆಗೆ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದವರು ಚುಟುಗಳು. ಅನಂತರ ಅವರ ಸ್ಥಾನವನ್ನು ಕದಂಬರ ಮಯೂರಶರ್ಮ ಚಕ್ರವರ್ತಿಯು ಆಕ್ರಮಿಸಿದನು. ಅವನ ಹಾಗೂ ಅವನ ವಂಶಜರ ಆಳಿಕೆ ಕ್ರಿ. ಶ. ೬೫೫ರ ವರೆಗೆ. ಅನಂತರ ಚಾಲುಕ್ಯರು, ರಾಷ್ಟ್ರಕೂಟರು, ಚಾಲುಕ್ಯರು, ಯಾದವಸೇವುಣರು ಚಕ್ರವರ್ತಿಗಳಾದರು. ಆವರು ಬನವಾಸಿಪ್ರದೇಶವನ್ನು "ಬನವಾಸಿಯ ಕದಂಬರು" ಎಂಬ ಗ್ರಂಥದಲ್ಲಿ ಹೇಳಿದಂತೆ ವಿವಿಧ ರಾಜಪ್ರತಿನಿಧಿ–ರಾಜ್ಯಪಾಲರ ಮೂಲಕ ಆಳಿದರು. ಕ್ರಿ. ಶ ೬೫೫ ರಿಂದ ೯೭೭ರ ವರೆಗೆ ಕದಂಬ ಕುಲದವರೇ ರಾಜ್ಯಪಾಲರಾದರು. ೯೭೭ ರಿಂದ ೧೩೪೭ರ ವರೆಗೆ ಕದಂಬ ಮಹಾಮಂಡಲೇಶ್ವರರು ಆನುವಂಶಿಕ ಸಾಮಂತರಾಗಿ ಹಾನುಗಲ್ಲುರಾಜಧಾನಿಯಿಂದ ಧಾರವಾಡ ಜಿಲ್ಲೆಯ ಭಾಗವನ್ನೊಳಗೊಂಡ, ಶಿವಮೊಗ್ಗ ಜಿಲ್ಲೆಯ ಭಾಗವನ್ನೊಳಗೊಂಡ, ಬನವಾಸಿ ೧೨೦೦೦ ವನ್ನೂ, ಹಾನು

ಗಲ್ಲಿ ೫೦೦ನ್ನೂ, ಉತ್ತರ-ದಕ್ಷಿಣ ಕನ್ನಡ ಜಿಲ್ಲೆಗಳ (ಗಟ್ಟದ ಕೆಳಗಿನ) ಕನ್ನಡಭಾಗವಾಗಿದ್ದ ಹೈವ ೫೦೦ನ್ನೂ ಆಳಿದರು. ೧೩೪೫ರ ಬಳಿಕ ಕದಂಬರಿಗೂ ಬನವಾಸಿಗೂ ಇರುವ ಸಂಬಂಧ ಕಣ್ಮರೆಯಾಯಿತು. ವಿಜಯ ನಗರದ ಚಕ್ರವರ್ತಿಗಳು ತಮ್ಮ ಚಕ್ರಾಧಿಪತ್ಯವನ್ನು ಬೆಳೆಯಿಸಿ, ಬೇರೆ ಬೇರೆ ರಾಜ್ಯಗಳನ್ನಾಗಿ ವಿಂಗಡಿಸಿ ರಾಜ ಪ್ರತಿನಿಧಿಗಳನ್ನೂ, ಮಹಾ ಮಂತ್ರಿಗಳನ್ನೂ, ದಣ್ಣಾಯಕ (ದಂಡನಾಥ) ರನ್ನೂ, ರಾಜ್ಯಪಾಲರನ್ನಾಗಿ ಮಾಡಿ ಅವುಗಳ ಆಡಳಿತವನ್ನು ನೋಡಿಕೊಂಡರು. ಆಗ ಕೆಳದಿ (ಇಕ್ಕೇರಿ, ಬಿದನೂರು) ಸಂಸ್ಥಾನ, ಸೋಂದೆಯ ಸಂಸ್ಥಾನ, ಬಿಳಗಿಯ ಸಂಸ್ಥಾನ ಮತ್ತು ಗೇರುಸೊಪ್ಪೆ (ನಗರೆ) ಹಾಡುವಳ್ಳಿ ಸಂಸ್ಥಾನಗಳು ಉದಯಿಸಿ ಸಾಮಂತಿಕೆಯನ್ನು ದಕ್ಷಿಣೋತ್ತರ-ಕನ್ನಡ ಜಿಲ್ಲೆಗಳಲ್ಲಿ ನಡೆಯಿಸಿದವು. ಈ ಎಲ್ಲ ಸಾಮಂತ, ಅನಂತರ ಸ್ವತಂತ್ರ ಎನ್ನಿಸಿದ ಸಂಸ್ಥಾನಗಳೆಲ್ಲವೂ ೧೭೬೩ರಲ್ಲಿ ಹೈದರಲ್ಲಿಯ ವಶವಾದವು. ಹೈದರು ಟಿಪ್ಪುಗಳು ಇವುಗಳನ್ನು ತಾವೇ ಸ್ವತಃ ೧೮೦೦ರ ವರೆಗೆ (ಒಬ್ಬರಾದಮೇಲೊಬ್ಬರು) ಆಳಿದರು. ಅಲ್ಲಿಂದ ಮುಂದೆ ೧೯೪೭ರ ವರೆಗೆ ಬ್ರಿಟಿಷ್ ರಾಜ್ಯಭಾರ, **ಹೆಚ್ಚು ಸಂಶೋಧನೆಗೆ ಒಳಪಡಬೇಕಾದ** ವಿಜಯನಗರದ **ರಾಜ್ಯಪಾಲಾದಿಗಳ** ಹೆಸರುಗಳನ್ನು ಮುಂದೆ ಕೊಡಲಾಗಿದೆ.



## ಪರಿಶಿಷ್ಟ : ೨

# ಸೋದೆ-ಬನವಾಸಿ ಪ್ರದೇಶವನ್ನಾಳಿದ
## ವಿಜಯನಗರದ ರಾಜ್ಯಪಾಲರು
## ಮತ್ತು
## ಅವರ ಉಪಾಧಿಕಾರಿಗಳು

೧. ೧೩೪೭–೧೩೬೯ :- ಮಾರಪ್ಪ ಒಡೆಯ ಮತ್ತು ಮಾಧವ ಮಂತ್ರಿ

೨. ೧೩೬೯–೧೩೭೭ :- ಸೋಮಣ್ಣ ಒಡೆಯ ಮತ್ತು ಹರಿಯಪ್ಪ ಒಡೆಯ

೩. ೧೩೭೭–೧೩೮೧ :- ೧ನೆಯ ವಿರೂಪಾಕ್ಷರಾಯ

೪. ೧೩೮೧–೧೩೯೦ :- ಚಿಕ್ಕರಾಯ ಮತ್ತು ವೀರ ವಸಂತರಾಯ

೫. ೧೩೯೦–೧೪೦೨ :- ೧ನೆಯ ಮಲ್ಲಪ್ಪ ಒಡೆಯ

೬. ೧೪೦೨–೧೪೦೮ :- ಭಾಸ್ಕರ ಒಡೆಯ ಮತ್ತು ವಿಟ್ಟಣ್ಣ ಒಡೆಯ

೭. ೧೪೦೮–೧೪೧೯ :- ವೀರಣ್ಣ ಒಡೆಯ ಮತ್ತು ವಿರೂಪಾಕ್ಷ ದಣ್ಣಾಯಕ. ದಣ್ಣಾಯಕನ ಅಧಿಕಾರಾವಧಿ ೧೪೧೭–೧೪೧೯

೮. ೧೪೧೯–೧೪೨೧ :- ಮಲ್ಲಪ್ಪ ಒಡೆಯ ಸಿರಿಗಿರಿನಾಥ ಒಡೆಯ ಸಿರಿಗಿರಿನಾಥ ಅಧಿಕಾರಾವಧಿ ೧೪೨೧

೯. ೧೪೨೧–೧೪೨೪ :- ತ್ರ್ಯಂಬಕ ಒಡೆಯ

೧೦. ೧೪೨೪–೧೪೩೧ :- ರಾಯಣ್ಣ ಒಡೆಯ

೧೧. ೧೪೩೧–೧೪೩೩ :- ಸಿರಿಗಿರಿನಾಥ ಒಡೆಯ

೧೨. ೧೪೩೩–೧೪೪೮ :- ಇರುಗಪ್ಪ ಒಡೆಯ

೧೩. ೧೪೪೮–೧೪೪೯ :- ಮಲ್ಲರಸ ಒಡೆಯ

೧೪. ೧೪೪೯–೧೪೫೦ :- ಬೈಚಣ್ಣ ಒಡೆಯ

೧೫. ೧೪೫೦–೧೪೬೬ :- ಸಿರಿಗಿರಿನಾಥ ಒಡೆಯ

೧೬. ೧೪೬೬–೧೪೬೭ :- ದೇವಪ್ಪ ದಣ್ಣಾಯಕ

೧೭. ೧೪೬೭ ೧೪೮೮ :- ಬೈಚಣ್ಣ ಒಡೆಯ

೧೮. ೧೪೮೮–೧೪೯೪ :- ೨ನೆಯ ಸಾಳುವ ದೇವರಾಯ ಭೈರವ ದೇವ

೧೯. ೧೪೯೪–೧೫೨೦ :- ೧ನೆಯ ದೇವರಸ ( ಸಾಳುವ )

೨೦. ೧೫೨೦–೧೫೩೦ :- ೨ನೆಯ ದೇವರಸ ( ಸಾಳುವ )

೨೧. ೧೫೩೦–೧೫೪೯ :- ಕೃಷ್ಣದೇವರಸ ( ಸಾಳುವ )

೨೨. ೧೫೪೯–೧೫೫೫ :- ಕೆಳದಿಯ ( ಇಮ್ಮಡಿ ) ಸದಾಶಿವರಾಯ

೨೩. ೧೫೫೫–೧೫೯೮ :- ಸೋದೆಯ ( ಇಮ್ಮಡಿ ) ಅರಸಪ್ಪನಾಯಕ

೨೪. ೧೫೯೮–೧೬೧೮ :- ಸೋದೆಯ ರಾಮಚಂದ್ರನಾಯಕ

೨೫. ೧೬೧೮–೧೬೩೮ :- ಸೋದೆಯ ರಘುನಾಥನಾಯಕ

೨೬. ೧೬೩೮–೧೬೭೪ :- ಸೋದೆಯ ಮಧುಲಿಂಗನಾಯಕ

೨೭. ೧೬೭೪–೧೬೯೭ :- ಸೋದೆಯ ೧ನೆಯ ಸದಾಶಿವರಾಯ

೨೮. ೧೬೭೭–೧೭೪೫ :- ಸೋದೆಯ ಬಸವಲಿಂಗನಾಯಕ

೨೯. ೧೭೪೫–೧೭೬೩ :- ಸೋದೆಯ ೨ನೆಯ ಸದಾಶಿವರಾಯ



## ಪರಿಶಿಷ್ಟ : ೩

# ಬನವಾಸಿಯ ಕೆಲ ಶಾಸನಗಳು

(ದಕ್ಷಿಣಭಾರತದ ಶಾಸನಗಳ ಪುರವಣಿಗೆಯ ಅನುಕ್ರಮ ಸಂಖ್ಯೆಗಳನ್ನಿಲ್ಲಿ ಕೊಡಲಾಗಿದೆ; ಪ್ರಕಟನದ ಇಸವಿ ೧೯೨೭)

೧. ೧೧೭ :- ಸೋದೆಯ ದೊರೆ ರಘುನಾಥನಾಯಕನು ಮಧುಕೇಶ್ವರ ದೇವರಿಗಿತ್ತ ಕಲಾಮಯ ಕಲ್ಲುಮಂಚದ ಮೇಲೆ ಕೊರೆಯಿಸಿದ ಶಾಸನ; ಇಸವಿ ೧೬೨೮.

೨. ೧೧೮ :- ಚಾಲುಕ್ಯ ಭೂಲೋಕಮಲ್ಲನ (೩ನೆಯ ಸೋಮೇಶ್ವರನ) ಕಾಲದ (೧೧೨೭–೧೧೩೬) ಕದಂಬ ಮಹಾಮಂಡಲೇಶ್ವರನನ್ನು (ಹಾನುಗಲ್ಲಿಂದ ಆಳುತ್ತಿದ್ದ ೨ನೆಯ ತೈಲಪ ಕದಂಬನನ್ನು) ಸೂಚಿಸುವ ಶಾಸನ.

೩. ೧೧೯ :- ವಿಜಯನಗರದ ೨ನೆಯ ದೇವರಾಯನ ಕಾಲದ (೧೪೨೪-೧೪೪೭) ಶಾಸನ; ಅದರ ಇಸವಿ ೧೪೩೨ ಅದರಲ್ಲಿ ತ್ರಿಭುವನ ಭರತಾಚಾರ್ಯನೆಂಬ ಬಿರುದಿನಿಂದ ಬನವಾಸಿಯ ಚಿಕ್ಕದೇವ ಒಡೆಯನ ಮಗನಾದ ಮಲ್ಲಣ್ಣಯ್ಯನು ಬನವಾಸಿ ಪ್ರದೇಶವನ್ನೂ ಮಹಾಪ್ರಧಾನ ಜಯಿಚಿ ದಣ್ಣನಾಯಕನು ಗೋವೆ-ಗುತ್ತಿ ಮೇಲೆ ಪ್ರದೇಶವನ್ನೂ ಆಡಳಿತಾಧಿಕಾರಿಗಳಾಗಿ ನೋಡಿ ಕೊಳ್ಳುತ್ತಿದ್ದುದರ ಉಲ್ಲೇಖವಿದೆ. ಆಗ ರಾಯಣ್ಣನ ಮಗ ಮಲ್ಲಣ್ಣನು ಮಧುಕೇಶ್ವರ ದೇವಾಲಯವನ್ನು ಹೊಕ್ಕ ಕಳ್ಳರೊಡನೆ ಹೋರಾಡಿ ಮಡಿದಾಗ ಅವನಿಗೆ ಅವನ ಕುಟುಂಬಕ್ಕೆ ಭೂದಾನ ಮಾಡಲಾಯ್ತು.

೪. ೧೨೦ :- ಮಧುಕೇಶ್ವರ ದೇವಾಲಯದ ಪ್ರಾಕಾರದೊಳಗಿನ ನರಸಿಂಹ ಮಂದಿರದ ಒಂದಿದ್ದು ಶಾಸನ : ಇಸವಿ ೧೫೫೨. ಅದರಲ್ಲಿ ವಿಜಯನಗರದ ಸದಾಶಿವ ದೇವ ಮಹಾರಾಯನ ಕಾಲದಲ್ಲಿ (೧೫೪೨–೧೫೭೦) ಮಹಾಮಂಡಲೇಶ್ವರರಾದ ವೆಂಕಟಾದ್ರಿ ರಾಜ ಮತ್ತು ತಿರುಮಲರಾಜರು (೧೫೭೦–೧೫೭೨) ಚಂದ್ರಗುಪ್ತಿದುರ್ಗದಿಂದ ಆಳುತ್ತಿದ್ದರೆಂದೂ ಅವರು ಅರವೀಟಿಕುಟುಂಬದ ಶ್ರೀರಂಗರಾಜನ ಮಕ್ಕಳೆಂದೂ ಅವರ ಊಳಿಗದ ಪದುಮಪ್ಪನು ಪಾರ್ವತಿ ಮತ್ತು ನರಸಿಂಹರ ಮಂದಿರಗಳಿಗೆ ಕಲ್ಲು-ಕಟ್ಟಡಗಳನ್ನು ಜೋಡಿಸಿದರೆಂದೂ ಉಲ್ಲೇಖಿಸಲಾಗಿದೆ.

೫. ೧೨೧ :- ಪ್ರಾಕಾರದ ಪಡುವಣ ಗೋಡೆಯಲ್ಲಿದ್ದ ೧೫೭೨ನೆಯ ಇಸವಿಯ ಶಾಸನದಲ್ಲಿ ವಿಜಯನಗರ ಚಕ್ರವರ್ತಿಯ ಮಹಾಮಂಡಲೇಶ್ವರ ರಾಮರಾಜಯ್ಯ-ವೆಂಕಟಾದ್ರಿ ರಾಜಯ್ಯ ದೇವನ ಮಗನಾದ ರಂಗಪ್ಪರಾಜಯ್ಯನ ಆಜ್ಞಾನುಸಾರವಾಗಿ ಕೌಶಿಕಗೋತ್ರದ ಆಪಸ್ತಂಬ ಶಾಖೆಯ ಸೋದೆಯ ದೊರೆ ಇಮ್ಮಡಿ ಅರಸಪ್ಪ ನಾಯಕನ ರಾಣಿಯಾದ ಅರಸಾದೇವಿ ಅಮ್ಮನವರು ಅವರ ಮಗ ರಾಮಚಂದ್ರನಾಯಕನೂ ನರಸಿಂಹ ದೇವರ ಪೂಜೆಗಾಗಿ ಭೂದಾನ ಮಾಡಿದ್ದನ್ನು ಹೇಳಲಾಗಿದೆ.

೬. ೧೨೨ :- ಪ್ರಾಕಾರದ ಪಡುವಣ ಮೂಲೆಯಲ್ಲಿ ಪದ್ಮನಾಯಕನನ್ನೂ ಭೂದಾನವನ್ನೂ ಉಲ್ಲೇಖಿಸಿದ ಶಾಸನವಿದೆ.

೭. ೧೨೩ :- ಎದುರಿಂದ ಒಳಹೊಕ್ಕಾಗ ಪ್ರಾಕಾರದಲ್ಲಿ ಬಲಗಡೆ ವಿಷ್ಣು ಸ್ಕಂದ ಚುಟುವಿನ ಮಗಳಾದ ಶಿವಸ್ಕಂದ

ನಾಗಶ್ರೀ ಕೊಟ್ಟ, ಬ್ರಾಹ್ಮಿಶಾಸನವುಳ್ಳ, (೨೦೦ ರ) ಪಂಚಮುಖಿ ನಾಗನ ಕಲ್ಲಿದೆ. ಅವಳದನ್ನು ಮಂತ್ರಿ ಸ್ಕಂದಸ್ವಾತಿಯ ಮೂಲಕ ಮಾಡಿಸಿದಳು. ಸಂಜಯಂತೀ ನಿವಾಸಿ ಇದೆ ಮೋರಕನ ಶಿಷ್ಯ-ನಟಕ ಅವರ ಶಿಲ್ಪಿ.

೮. ೧೨೪ :- ಮಧುಕೇಶ್ವರ ಮತ್ತು ಪಾರ್ವತೀ ದೇವಿಯರ ಗುಡಿಗಳ ನಡುವೆ ೧೫೯೮–೯೯ ರಲ್ಲಿ ಮಹಾಪ್ರಭು ಇಮ್ಮಡಿ ಅರಸಪ್ಪ ನಾಯಕ (ಸೋದೆ) ಮಾಡಿದ ಭೂದಾನ ಶಾಸನವಿದೆ.

೯. ೧೨೫ :- ಪಾರ್ವತೀ ದೇವಿಯ ಗುಡಿಯಲ್ಲಿಯ ಕಂಬದಲ್ಲಿ ಸೋದೆಯ ೧ನೆಯ ಸದಾಶಿವ ರಾಜೇಂದ್ರ ಕಟ್ಟಿಸಿದ ಕಲ್ಲು ಮಂಟಪದ ಉಲ್ಲೇಖವಿದೆ. ಅವಳ ಆಳಿಕೆ ೧೬೭೪ ರಿಂದ ೧೬೯೭ರ ವರೆಗೆ. ಪಟ್ಟಕ್ಕೇರುವ ಮೊದಲು ೧೬೦೦ ರಲ್ಲಿ ಅವನು ಆ ಮಂಟಪವನ್ನು ಮಾಡಿಸಿದ್ದು.

೧೦. ೧೨೬ :- ಮಧುಕೇಶ್ವರ ದೇವಾಲಯದ ಕಂಬದಲ್ಲಿಯ ಶಾಸನವು ಚಿಕ್ಕ ದೇವನು ಲಕುಲೇಶ್ವರ ದೇವನ ಶಿಷ್ಯನೆಂದೂ ಅವನು ಮಧುಕನಾಥ ದೇವನಿಗೆ ಭೂದಾನ ಮಾಡಿದನೆಂದೂ ಹೇಳಿದೆ.

೧೧. ೧೨೭ :- ಆ ದೇವಾಲಯದ ಕಂಬದ ಮೂರು ಪೈಗಳಲ್ಲಿ ವಿಜಯನಗರದ ಹರಿಹರ (೧೩೭೬–೧೪೦೪) ಬುಕ್ಕರಾಯನ ಮಗನೆಂದೂ ಮಾಧವಾ ಪ್ಯಾಸನು ೧೩೮೭ ರಲ್ಲಿ ಆಳುತ್ತಿದ್ದನೆಂದೂ ಶಾಸನೋಲ್ಲೇಖವಿದೆ. ಅವನ ಗೋವಾ ರಾಜ್ಯಪಾಲನು ದೇವಸ್ಥಾನಕ್ಕೆ ದಾನ ಮಾಡಿದ್ದು ಅದರಲ್ಲಿ ಮುಖ್ಯ.

೧೨. ೧೨೮ :- ಅವರ ಒಂದು ಕಂಬದಲ್ಲಿ ಕನ್ನಡ. ನಾಗರಿ ಮತ್ತು ತಮಿಳು ಲಿಪಿಗಳಲ್ಲಿ ಪಂಡಿತಾರಾಧ್ಯನ ಶಿಷ್ಯನಾದ ವಿಭೂತಿ ಗೌರಯ್ಯನ ಬರೆಹವಿದೆ

೧೩. ೧೨೯ :- ವೀರಭದ್ರ ದೇವಾಲಯದ ಎಡಕ್ಕೆ ೧೦೬೮ ರಲ್ಲಿ ಬರೆಯಿಸಿದ ಶಾಸನವು ಕದಂಬ ಕೀರ್ತಿವರ್ಮ ದೇವನು ಬನವಾಸಿ ಪನ್ನಿರ್ಛಾಸಿದ ( ೧೨೦೦೦ ) ವನ್ನು ಆಳುತ್ತಿದ್ದನೆಂದು ಹೇಳುತ್ತದೆ. ಕಲ್ಲದೇಗುಲಕ್ಕೆ ಅವನು ದಾನಕೊಟ್ಟನು. ಅವನ ಮೇಲ್ದೊರೆ ಚಾಲುಕ್ಯರ ೧ನೆಯ ತ್ರೈಲೋಕ್ಯಮಲ್ಲ ಸೋಮೇಶ್ವರ. ಅಲ್ಲಿಯ ಇನ್ನೊಂದು ಶಾಸನವು ಕೀರ್ತಿವರ್ಮನು ೬ನೆಯ ಚಾಲುಕ್ಯ ವಿಕ್ರಮನ ಸಾಮಂತನೆಂದಿದೆ.

೧೪. ೧೩೦ :- ಅದೇ ಸ್ಥಳದಲ್ಲಿರುವ ಇನ್ನೊಂದು ಕಲ್ಲು ಹಲಗೆಯಲ್ಲಿ ೧೩೬೮ರ ಶಾಸನವೊಂದು ವಿಜಯನಗರದ ವೀರ ಬುಕ್ಕರಾಯನ ಕಾಲದಲ್ಲಿ (೧೩೫೫-೧೩೭೭) ಮಹಾಪ್ರಭು ಮಾಧವಾಂಕನು ಬನವಾಸಿ ಪನ್ನಿರ್ಛಾಸಿರ ಪ್ರಾಂತವನ್ನು ಆಳುತ್ತಿದ್ದನೆಂದೂ ವೀರೇಶ್ವರ ದೇವರ ಪೂಜೆಗಾಗಿ ನಾಗರಸನು ಲಕುಲೇಶ್ವರ ದೇವ ಒಡೆಯನ ಶಿಷ್ಯನಾದ ಬಿಕ್ಕಿದೇವ ಒಡೆಯನು ಧನದಾನ ಮಾಡಿದನೆಂದೂ ಹೇಳಿದೆ. ರಟ್ಟಕಲ್ಲಿನ ಪ್ರಭು ಶಿವದೇವನ ಶಿಷ್ಯನಾದ ನಾಗಪ್ಪನು ವೀರಭದ್ರ ಮೂರ್ತಿಯನ್ನು ಸ್ಥಾಪಿಸಿ ೧೩೭೯ರಲ್ಲಿ ಆ ದೇವರ ಪೂಜೆಗಾಗಿ ಗ್ರಾಮದಾನ–ಧನದಾನಗಳನ್ನು ಕದಂಬ ಕುಲಾಚಾರ್ಯ ಲಕುಲೇಶ್ವರ ದೇವ ಒಡೆಯನ ಮಗ ಬಿಕ್ಕಿದೇವ ಒಡೆಯನಿಗೆ ಮಾಡಿದ ಕಲ್ಬರಹ ಅಲ್ಲೆ ಇದೆ.

೧೫. ೧೩೧ :- ಹಾನುಗಲ್ಲಿನ ರಾಜಧಾನಿಯಿಂದ ಬನವಾಸಿ ಪನ್ನಿ ಛಾಸಿರವನ್ನು ಆಳುತ್ತಿದ್ದ ಕೀರ್ತಿದೇವ ಕದಂಬನ (೧೧೫೧–೧೧೮೦) ಶಾಸನ ಅದೇ ಸ್ಥಳದ ೩ಸೆಯ ಕಲ್ಲು ಹಲಗೆಯಲ್ಲಿದೆ.

೧೬. ೧೩೨ :- ವೀರಭದ್ರ ದೇವರ ಗುಡಿಯಲ್ಲಿಯ ೧೬೦೦ ರ ಶಾಸನವೊಂದು ಸೋದೆಯ ೧ನೆಯ ಸದಾಶಿವ ರಾಜೇಂದ್ರನು ೧೬೭೪–೧೬೯೭) ಪಟ್ಟಕ್ಕೇರುವ ಮೊದಲು ಬನವಾಸಿ ನಗರವನ್ನು ಕನಕಾವತಿ ಯೆಂದು ಕರೆದುದನ್ನು ಹೇಳುತ್ತದೆ. ಮತ್ತು ಅಲ್ಲೊಂದು ಕಂಬ ನೆಡಿಸಿದ್ದು ಸದಾಶಿವ ರಾಜ ಪುತ್ರನ ಸೇವೆ ಎಂದು ಅದು ಉಲ್ಲೇಖಿಸುತ್ತದೆ.

೧೭. ೧೩೩ :- ಮಧುಕೇಶ್ವರ ದೇವಾಲಯದ ಇನ್ನೊಂದು ಬದಿಯ ಗೋಡೆಯಲ್ಲಿ ಭೂತನಾಥ ಯೋಗೇಶ್ವರ ಒಡೆಯ, ಸದಾಶಿವ ಒಡೆಯ, ಹಿರೇಸರ್ವೇಶ್ವರ ಒಡೆಯ ಮತ್ತು ಚೆನ್ನಪ ಒಡೆಯರ ಹೆಸರುಗಳನ್ನು ಕೆತ್ತಿಸಲಾಗಿದೆ.

೧೮-೨೫. ೧೩೪ ರಿಂದ ೧೪೧ರ ವರೆಗೆ :- ಆ ಗೋಡೆಯಲ್ಲಿ ಬನವಾಸಿ ಸ್ಥಳದ ಹಲವಾರು ಒಡೆಯರ ಹೆಸರುಗಳನ್ನು ಕೆತ್ತಿಸಲಾಗಿದೆ.

೨೬. ೧೪೨ :- ತ್ರಿಪುರಾಂತಕೇಶ್ವರದ ದೇವಾಲಯದ (ಗೋಪಿನಾಥನ ಗುಡಿಯ) ಕಂಬದಲ್ಲಿ ಚಂದ್ರಗುಪ್ತಿ ಪ್ರಾಂತರಾಜ್ಯದ ೧೮ ಕಂಪಣಗಳ ಗವುಡರೂ ಪ್ರಜೆಗಳೂ ಬನವಾಸೆಯಲ್ಲಿ ಸಭೆಸೇರಿ ನಂದಾಪುರದ ಚವುಡರಸನ ಮಗ ಅವು ಛಳನಾಥನ ಆಜ್ಞೆಯ ಪ್ರಕಾರ ಬಿಕ್ಕಿದೇವ ಆಯ್ಯನಿಗೆ ಭೂದಾನ ಮಾಡಿದರೆಂಬ ಶಾಸನವಿದೆ. ಬಿಕ್ಕಿದೇವನು ಲಕುಲೇಶ್ವರ ದೇವನ ಶಿಷ್ಯ.

ಅಹೋಬಲನಾಥನು ತಿರುಮಲೇಶ್ವರ ದೇವಾಲಯ ವನ್ನು ರಿಪೇರಿ ಮಾಡಿಸಿದನು. ಅವನು ಮಾಧವ ದಂಡನಾಥನ ಸೇವಕ. ಭೂದಾನ ಮಾಡಿದ್ದು ತಿರುಮಲೇಶ್ವರನ (ಹಿಂದಿನ ಗೋಪಿನಾಥನ) ಆರಾಧನೆಗಾಗಿ. ಮಾಧವ ದಂಡನಾಥನು ಬನವಾಸಿ ಪನ್ನಿರ್ಛಾಸಿರದ ರಾಜ್ಯಪಾಲ (೧೩೬೮) ಅವನ ಚಕ್ರವರ್ತಿ ಹಸ್ತಿನಾವತಿಯಿಂದ ಆಳುತ್ತಿದ್ದ ವೀರ ಬುಕ್ಕರಾಯ (೧೩೫೫–೧೩೭೭

೨೭. ೧೪೩ :- ಬನವಾಸಿಯ ಬಸದಿಯಲ್ಲಿ ದೇಸಿಗಣದ, ಪ್ರಸ್ತಕ ಗಚ್ಚದ, ಕೊಂಡಕುಂದಾನ್ವಯದ, ಸಕಲಚಂದ್ರ ಭಟ್ಟಾರಕರ ಶಿಷ್ಯೆಯಾದ ಭೋಗವ್ವೆಯ ಸಮಾಧಿಯ ಕಲ್ಬರೆಹವಿದೆ. ಅವಳು ತಿಪ್ಪಿಸೆಟ್ಟಿ ಸಾಂತಯ್ಯನ ಹೆಂಡತಿ. ಆ ಕಾಲ ಕದಂಬ ಚಕ್ರವರ್ತಿ ವೀರಮನ ಆಳಿಕೆಯ ೧೨ನೆಯ ವರ್ಷ, ದುರ್ಮತಿ ಸಂವತ್ಸರ. ೧೦೮೮ನೆಯ ಇಸವಿ. ಭೋಗವ್ವೆ ಸಮಾಧಿ ಹೊಂದಿದ್ದು ೧೦೮೧ರಲ್ಲಿ ಅದು ಕೀರ್ತಿವರ್ಮನ ಸಾಮಂತಿಕೆಯ ಕಾಲ. ವೀರಮ ಅಥವಾ 'ವೀರ ವಿಕ್ರಮ' ಅವನ ಬಿರುದು.

೨೮. ೧೪೪ :- ಬಸದಿಯಲ್ಲಿ ಮುರಿದೊರಗಿದ ಕಲ್ಲಿನ ಇನ್ನೊಂದು ಶಾಸನ ೧೧೧೫ರದ್ದು, ಕೀರ್ತಿವರ್ಮ ಕದಂಬನ ಸಾಮಂತಿಕೆ ೧೦೭೫ ರಿಂದ ೧೧೧೭ರ ವರೆಗೆ ಕಾವದೇವನ ಹೆಸರು ತಿರುಮಲ ದೇವರ ಗುಡಿಯ ಮುರುಕು ಕಲ್ಲೊಂದರಲ್ಲಿ ಬಂದುದಾದರೂ ಅವನ ಬಿರುದಾಗಿಯೇ.

೨೯. ೧೪೫ :- ಇನ್ನೊಂದು ಕಲ್ಲು ಹಲಗೆ ಅಲ್ಲಿ ಮರಕವೆ ೧೦೭೭ ರಲ್ಲಿ ಸಮಾಧಿ ಹೊಂದಿದ್ದನ್ನು ಹೇಳುತ್ತದೆ. ಅದು

ಬನವಾಸಿಯು ಕೀರ್ತಿವರ್ಮ ಕದಂಬನ ಸಾಮಂತಿಕೆಯು ಕಾಲ.

೩೦. ೧೪೬ :- ಮತ್ತೊಂದು ಕಲ್ಲು ಹಲಗೆ ಈಶ್ವರ ಸಂವತ್ಸರದ ವೈಶಾಖ ಮಾಸದಲ್ಲಿ ಬೊಪ್ಪಗಾವುಂಡನ ಮಗ ಕಾಳಗಾವುಂಡನ ಮರಣವನ್ನು ಉಲ್ಲೇಖಿಸಿದೆ. ಅಂದಿನ ಮೇಲ್ದೊರೆ ದೇವಗಿರಿಯ ಸೇವುಣ ಯಾದವರಲ್ಲಿ ಒಬ್ಬನೆಂದು ಹೇಳಲಾಗಿದೆ. ಅಂದು ದಾನುಗಲ್ಲಿನಿಂದ ಬನವಾಸಿ ಪನ್ನಿರ್ಛಾಸಿರವನ್ನು ಅವರ ಸಾಮಂತರಾಗಿ ಅಥವಾ ಸಹಕಾರಿಗಳಾಗಿ ಕದಂಬ ಕುಲದವರು ಆಳುತ್ತಿದ್ದರು.

**B. H. Shreedhar**

## ಪರಿಶಿಷ್ಟ ೪

# ಬನವಾಸಿ ( ಜಯಂತಿ ) ಕ್ಷೇತ್ರ ಮಹಾತ್ಮೆ

ಪೂರ್ವಕಾಲದಲ್ಲಿ ತಪೋನಿಷ್ಠರೂ ವೈರಾಗ್ಯ ಚಕ್ರವರ್ತಿಗಳೂ ಆದ ವಸಿಷ್ಠ, ಆಂಗೀರಸ ಮೊದಲಾದ ಋಷಿಗಳು ಮೋಕ್ಷ ಸಾಧನೆ ಗೈಯಲು ಸುಲಭವಾದ ಉಪಾಯದ ಬಗ್ಗೆ ಚರ್ಚಿಸುತ್ತಿದ್ದರು. ಶಿವ ಭಕ್ತಿ ಪರಾಯಣರಾದ ಸೂತಪೂರಾಣಿಕರು ಆ ವೇಳೆಯಲ್ಲಿ ಅಲ್ಲಿಗೆ ಚಿತ್ತೈಸಿ, ಚರ್ಚೆಯಲ್ಲಿ ಭಾಗ ವಹಿಸಿದರು. ಅವರು ಶಿವಕ್ಷೇತ್ರದಲ್ಲಿ ವಾಸವಾಗಿದ್ದು, ಸಕಲ ಲೋಕಗಳಿಗೂ ಮಂಗಳವನ್ನುಂಟು ಮಾಡುವ ಶಂಕರನನ್ನು ಭಕ್ತಿಯಿಂದ ಆರಾಧಿಸಿದರೆ, ಈ ಲೋಕದಲ್ಲಿ ಸತ್ಯ ವಂತನೂ, ಸುಖಿಯೂ ಆಗಿ ಬಾಳಿ, ಮೋಕ್ಷವನ್ನು ನಿಶ್ಚಿತವಾಗಿಯೂ ಪಡೆಯಬಹುದೆಂದು ಎಲ್ಲರಿಗೂ ತಿಳಿಸಿದರು. ಅಂಥ ಕ್ಷೇತ್ರ ಯಾವು ದೆಂದು ಪ್ರಶ್ನಿಸಲಾಗಿ, ಫಲಪುಷ್ಪಗಳಿಂದ ತುಂಬಿರುವ ವೃಕ್ಷಗಳು, ನೀತಿ ವಂತರೂ, ಸುಸಂಪನ್ನರೂ ಆದ ಜನರು ಶಾಂತವಾಗಿ ಹರಿಯುವ ವರದಾ ನದಿಯಿರುವ ಜಯಂತಿ ಕ್ಷೇತ್ರವು ಅತಿ ಯೋಗ್ಯವಾಗಿದೆಯೆಂದು ಹೇಳಿದರು.

ಶಂಕರನು ಕೈಲಾಸದಿಂದ ಆಗಮಿಸಿ ಜಯಂತಿ ಕ್ಷೇತ್ರದಲ್ಲಿ ವಾಸಿ ಸುವ ವಿಶೇಷ ಕಾರಣಗಳೇನೆಂದು ಋಷಿಗಳು ಕೇಳಲಾಗಿ, ಸೂತಪೂರಾಣಿ ಕರು ಹೇಳತೊಡಗಿದರು. ಶಂಕರನ ಅರ್ಧಾಂಗಿಯಾದ ಪಾರ್ವತಿಯು ಭೂಲೋಕದಲ್ಲಿ ವಾಸಿಸುವ ತನ್ನ ಇಚ್ಛೆಯನ್ನು ತಿಳಿಸಿದಾಗ, ಅಂತಜ್ಞಾ ನಿಯಾದ ಶಂಕರನು ಇಂಥ ಸಮಯ ಬೇಗನೆ ಬರಲಿದೆಯೆಂದೂ, ಸಪರಿ ವಾರ ಸಹಿತವಾಗಿ ಭೂಲೋಕದಲ್ಲಿ ವಾಸಿಸಬೇಕಾಗುವದೆಂದೂ ತಿಳಿಸಿ, ಆಕೆಯನ್ನು ಸಮಾಧಾನ ಪಡಿಸಿದನು.

ಈ ವೇಳೆಯಲ್ಲಿ ಮಧು, ಕೈಟಭರೆಂಬ ರಾಕ್ಷಸ ಸಹೋದರರು ಲೋಕಕಂಟಕರಾಗಿ, ಸಕಲರಿಗೂ ತೊಂದರೆ ನೀಡುತ್ತಿದ್ದರು. ಅವರನ್ನು ಸಂಹರಿಸಲು, ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ವಿಷ್ಣುವು ಆಗಮಿಸಿದನು. ಯುದ್ಧದಲ್ಲಿ ಸೋಲಿಸಲು ಕಷ್ಟಸಾಧ್ಯವೆಂದು ತಿಳಿದ ಅವನು ರಾಕ್ಷಸ ಸಹೋದರರನ್ನು ಹೊಗಳಿ, ತನ್ನಿಂದ ಬೇಕಾದುದನ್ನು ಪಡೆಯಬಹು ದೆಂದು ಹೇಳಿದನು. ರಾಕ್ಷಸ ಸಹೋದರರು ಅಟ್ಟಹಾಸ ಗೈಯ್ಯುತ್ತಾ "ನಮಗೆ ನಿನ್ನಿಂದ ಪಡೆಯಬೇಕಾದುದು ಏನೂ ಇಲ್ಲ. ನೀನೇ ಬೇಕಾ ದುದನ್ನು ಕೇಳು" ಎಂದು ಹೇಳಿದರು. ವಿಷ್ಣುವು ಮುಗುಳ್ನಕ್ಕು, ವಚನಬದ್ಧರಾದ ನಿಮ್ಮಿಬ್ಬರ ಪ್ರಾಣ ಲೋಕ ಕಲ್ಯಾಣಕ್ಕಾಗಿ ಬೇಕಾಗಿದೆ ಯೆಂದು ತಿಳಿಸಿದನು.

ಹಿರಿಯವನಾದ ಮಧು ಎಂಬ ರಾಕ್ಷಸನು ಮಹಾವಿಷ್ಣುವೇ, ನಿಮ್ಮ ವಚನದಂತೆ ನಾವಿಬ್ಬರೂ ಪ್ರಾಣ ನೀಡುವೆವು. ಶಿವ ಭಕ್ತರಾದ ನಮ್ಮಿಬ್ಬರ ಹೆಸರು ಚಿರಸ್ಥಾಯಿಯಾಗಿರುವಂತೆ. ನಮ್ಮಿಬ್ಬರ ಹೆಸರಿನಿಂದ ಒಂದೊಂದು ಶಿವಲಿಂಗವನ್ನು ಸ್ಥಾಪಿಸಿ. ಮಹಾದೇವನನ್ನು ನೀನೇ ಅವು ಗಳಲ್ಲಿ ಆವ್ಹಾನಿಸಬೇಕಲ್ಲದೇ, ನೀನೂ ಇಲ್ಲಿಯೇ ವಾಸ ಮಾಡಬೇಕೆಂದು ಕೇಳಿಕೊಂಡನು. ವಿಷ್ಣುವು ಸಂತೋಷದಿಂದ ಈ ಮಾತನ್ನು ಒಪ್ಪಿದನು. ಅವರಿಬ್ಬರೂ ಶಿವಧ್ಯಾನ ಮಾಡುತ್ತ ಪ್ರಾಣವನ್ನು ಅರ್ಪಿಸಿದರು.

ಅವರಿಬ್ಬರೂ ಪ್ರಾಣ ಬಿಟ್ಟ ಸ್ಥಳವೇ ಈ ಜಯಂತಿ ಕ್ಷೇತ್ರವು. ಮಧುವಿನ ಮಹಿಮೆಯಂತೆ, ಮಹಾವಿಷ್ಣುವು, ಮಧು ವರ್ಣದ ಮಹಾ ಲಿಂಗವನ್ನು ಸ್ಥಾಪಿಸಿ, ಶಂಕರನನ್ನು ಆವ್ಹಾನಿಸಿ ಮಧುಕೇಶ್ವರನೆಂದು ಕರೆದನು. ಪಾರ್ವತಿಯ ಇಚ್ಛೆ ನೆರವೇರಿತು. ಸಪರಿವಾರ ಸಹಿತ ಶಂಕರನು ಈ ಕ್ಷೇತ್ರದಲ್ಲಿ ವಾಸಿಸಿ ಭಕ್ತರ ಅಭೀಷ್ಟಗಳನ್ನು ಪೂರೈಸುತ್ತಿರುವನು, ಮಧುವಿನ ಇಚ್ಛೆಯಂತೆ ಮಾಧವನೆಂಬ ಹೆಸರಿನಿಂದ ವಿಷ್ಣುವೂ ಇಲ್ಲಿಯೇ ವಾಸಿಸಿದನು. ಕೈಟಭನ ಹೆಸರಿನಿಂದ ಕೈಟಭೇಶ್ವರ ಲಿಂಗವನ್ನು ಕುಬ ಟೂರಿ (ಆನವಟ್ಟಿ) ನಲ್ಲಿ ಸ್ಥಾಪಿಸಿದ್ದಾನೆ.

ಶ್ರೀರಾಮನು ಮಧುಕೇಶ್ವರನನ್ನು ಆರಾಧಿಸಿ, ಅನೇಕ ಅಸ್ತ್ರಗಳನ್ನು ಪಡೆದು ರಾವಣನನ್ನು ಸಂಹರಿಸಿದನು. "ರಾಮತೀರ್ಥ" ಎಂಬ ಜಲಾಶಯು ಈಗಲೂ ಇದೆ ತಾರಕಾಸುರನನ್ನು ಸಂಹಾರ ಮಾಡುವಾಗ ಷಣ್ಮುಖನು ತನ್ನ ತಂದೆಯ ಆಶೀರ್ವಾದವನ್ನು ಇಲ್ಲಿಯೇ ಪಡೆದನು. ಸೂರ್ಯನಾರಾಯಣನು ತನ್ನ ಮಾವನಿಂದ ಕತ್ತರಿಸಲ್ಪಟ್ಟ ಸಹಸ್ರ ಕಿರಣಗಳನ್ನು, ಮಧುಕೇಶ್ವರನನ್ನು ಆರಾಧಿಸಿ ಪುನಃ ಪಡೆದಿರುವನು, ವಸಿಷ್ಠಾದಿ ಮುನಿಗಳು ಮಧುಕೇಶ್ವರನನ್ನು ಆರಾಧಿಸಿ, ಮೋಕ್ಷ ಸಾಧನೆಗೈದರೆಂಬ ಬಗ್ಗೆ "ವಸಿಷ್ಠ ತೀರ್ಧ" ಈಗಲೂ ಇದೆ

ಕರ್ನಾಟಕಕ್ಕೆ ಸ್ವತಂತ್ರ ಸಾಮ್ರಾಜ್ಯ ನೀಡಿದ ಕದಂಬ ಕುಲದ ಮಯೂರವರ್ಮನಂತೂ ಮಧುಕೇಶ್ವರನಿಂದಲೇ ಸ್ಫೂರ್ತಿ ಪಡೆದನು. ಕರ್ನಾಟಕದಲ್ಲಿ ಆಳಿದ ಎಲ್ಲ ವಂಶಗಳ ರಾಜ ಮಹಾರಾಜರು ತಮ್ಮ ಶಕ್ತ್ಯಾನುಸಾರ ಈ ದೇವಸ್ಥಾನಕ್ಕೆ ಸೇವೆ ಸಲ್ಲಿಸಿದ್ದಾರೆಂಬುದಕ್ಕೆ ದೇವಸ್ಥಾನವೇ ಸಾಕ್ಷಿ ಹೇಳುತ್ತಿದೆ.

ಈ ಕ್ಷೇತ್ರದ ಜನರು ಸಂತೋಷದಿಂದ ಮಧುಕೇಶ್ವರನನ್ನು ಆರಾಧಿಸುತ್ತ, ಈ ವರೆಗೂ ದೇವಸ್ಥಾನವನ್ನು ರಕ್ಷಿಸಿ ಉಳಿಸಿಕೊಂಡು ಬಂದಿದ್ದಾರೆ.

ಇಂದಿಗೂ ಮಧುಕೇಶ್ವರನಿಗೆ ತ್ರಿಕಾಲಗಳಲ್ಲಿ ಪೂಜಾದಿ ವಿನಿಯೋಗಗಳು ನಡೆಯುತ್ತವೆ. ಹಿಂದೂಧರ್ಮದ ಎಲ್ಲ ಪಂಗಡಗಳ ಜನರು ತಮ್ಮ ಭೇದಭಾವಗಳನ್ನೆಲ್ಲ ಮರೆತು, ಶ್ರದ್ಧಾಭಕ್ತಿಯಿಂದ ಸ್ವಾಮಿಯ ಸೇವೆಯನ್ನು ಮಾಡುತ್ತಿದ್ದಾರೆ.

ಚೈತ್ರ ಶುದ್ಧದಲ್ಲಿ ಮಘಾ ನಕ್ಷತ್ರದ ದಿನ ಮಹಾಸ್ಯಂದನ ರಥೋತ್ಸವ ಜರುಗುವದು. ಸಾವಿರಾರು ಜನರು ಸೇರುವರು. ನವರಾತ್ರಿಯ ಉತ್ಸವವು ವಿಜೃಂಭಣೆಯಿಂದ ಜರುಗುವದು ಪಾರ್ವತಿ ದೇವಸ್ಥಾನದಲ್ಲಿ ಪ್ರತಿ ದಿನವೂ ಪದ್ಧತಿಗನುಸಾರವಾಗಿ ಅಲಂಕಾರ ಪೂಜಾದಿಗಳು ಜರುಗುವವು. ಈ ಕಾಲದಲ್ಲಿ ಲಕ್ಷಾವಧಿ ರೂಪಾಯಿ ಬೆಲೆ ಬಾಳುವ ದಾಗಿನೆಗಳಿಂದ ದೇವಿಗೆ ಅಲಂಕಾರ ಮಾಡುವರು. ವಿಜಯ ದಶಮಿಯ

ದಿನ ರಜತ ಮಂಟಪದಲ್ಲಿ ಬನ್ನಿ ಮಂಟಪಕ್ಕೆ ಸಾಗುವ ಉತ್ಸವದಲ್ಲಿ ಸಾವಿರಾರು ಜನರು ಭಾಗ ವಹಿಸುವರು. ಕಾರ್ತಿಕ ಬಹುಳದಲ್ಲಿ ಮಘಾ ನಕ್ಷತ್ರದಂದು ಜರುಗಲಿರುವ ಲಕ್ಷ ದೀಪೋತ್ಸವವು ಭಕ್ತ ಜನರ ಕಣ್ಮನ ಗಳನ್ನು ತಣಿಸುವದು, ಮಹಾಶಿವರಾತ್ರಿಯ ದಿನ ಸೂರ್ಯೋದಯದಿಂದ ಮರುದಿನ ಸೂರ್ಯೋದಯದ ವರೆಗೂ ಸಾವಿರಾರು ಭಕ್ತರಿಂದ, ಹಾಗೂ ದೇವಸ್ಥಾನದಿಂದ ವಿಶೇಷ ಪೂಜೆಗಳು ಜರುಗುವವು.

ಜಯಂತಿ ( ಬನವಾಸಿ ) ಕ್ಷೇತ್ರದ ಶ್ರೀ ಮಧುಕೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಪೂಜಾದಿ ವಿನಿಯೋಗಗಳನ್ನೂ, ಹರಿಕೆ, ಸೇವೆ ಮೊದಲಾದ ವುಗಳನ್ನೂ ದೇವಸ್ಥಾನದ ಆಡಳಿತ ಕಮಿಟಿಯ ವತಿಯಿಂದ ವ್ಯವಸ್ಥಿತ ವಾಗಿ ಜರುಗಿಸಿ ಕೊಡಲಾಗುತ್ತದೆ. ಸದ್ಯದಲ್ಲಿಯೇ ಸುವ್ಯವಸ್ಥಿತವಾಗಿ ಉಪನಯನ, ಮದುವೆ, ಮೊದಲಾದವುಗಳನ್ನು ಮಾಡಿಸುವ ಬಗ್ಗೆ ಸೌಕರ್ಯ ಒದಗಿಸುವ ಸಿದ್ಧತೆ ನಡೆದಿದೆ.

ಶಿರಸಿ, ಶಿವಮೊಗ್ಗಾ, ಸಾಗರ ಈ ಊರುಗಳಿಂದ ಪ್ರತಿದಿನ ಬಸ್ಸುಗಳು ಓಡಾಡುತ್ತವೆ. ನೂರಾರು ಸಂದರ್ಶಕರು ಬರುತ್ತಿರುತ್ತಾರೆ.

ಬನವಾಸಿ ಕ್ಷೇತ್ರದ ಸಮೀಪದಲ್ಲಿಯೇ ಇರುವ ಗುಡ್ನಾಪುರ ಕೆರೆಯು ಕೋಟಿತೀರ್ಥವೆಂಬ ಹೆಸರಿನಿಂದ ಪ್ರಸಿದ್ಧವಿದ್ದು, ಅಲ್ಲಿರುವ ಬಂಗಾರೇಶ್ವರ ದೇವರಿಗೆ ಬಹಳ ಜನರು ನಡೆದುಕೊಳ್ಳುತ್ತಾರೆ. ಚಳಿಗಾಲ ಹಾಗೂ ಬೇಸಿಗೆಗಳಲ್ಲಿ ಪ್ರತಿ ಶುಕ್ರವಾರ ಮತ್ತು ಮಂಗಳವಾರ ದೂರ ದೂರದಿಂದ ಯಾತ್ರಿಕರು ಬರುತ್ತಾರೆ.

ಸಂಗ್ರಾಹಕರು :– **ರಾಮಚಂದ್ರ ನರಸಿಂಹ ಮಂಗಳೂರ**

## ಓಂ ನಮಃ ಶಿವಾಯ

ಯ ಸರ್ವತಶ್ಚಕ್ಷುರನಂತ ಮೂರ್ಧಾ
ಯ ಸ್ತತ್ವಮಸ್ಯಾದಿ ಪದೈಕ ಲಕ್ಷ್ಯಃ ।
ತಂ ಸಚ್ಚಿದಾನಂದ ಮಯಂ ಮಹೇಶಂ
ತ್ರಯಿಮಯಂ ಶ್ರೀ ಮಧುಕೇಶ ಮೀಡೇ ॥ ೧ ॥

ಶ್ರೀ ಮನ್ನಗೇಂದ್ರ ತನಯಾಶ್ರಿತ ವಾಮಭಾಗಃ
ಸದ್ಭಕ್ತವೃಂದ ಪರಿಸೇವಿತ ಪಾದ ಪದ್ಮಃ
ಭೂತ್ಯೈ ಸರ್ವೋಸ್ತು ಭಗವಾನ್ ಮಧು ಕೈಟಭಾರಿ
ಸಂಸ್ಥಾಪಿತಃ ಶಶಿಧರೋಃ ಮಧುಕೇಶ್ವರಾಖ್ಯಃ ॥ ೨ ॥

**ಕರ್ತಾ ಬ್ರಹ್ಮಶ್ರೀ ಆಹಿತಾಗ್ನೀ ಗಣಪತಿ ಸುಬ್ರಹ್ಮಣ್ಯ ಶರ್ಮಾ ಗೋಕರ್ಣ**

ಕಲೌ ಯುಗೇಸ್ಮಿನ್ ಬನವಾಸಿ ಕೇತಿ ।
ಶುಭ ಪ್ರದಾಯಾ ಕಥಿತಾ ಪಿ ಸರ್ವೈಃ ।
ತಸ್ಯಾಂ ನಗರ್ಯಾಂ ಮಮಾಯಾ ಸಮೇತಂ ।
ವಸಂತಮಾದ್ಯಂ ಮಧುಕೇಶ ದೇವಂ ॥ ೧ ॥

ಯಸ್ಯಾನುಗ್ರಹ ಪ್ರಾಪ್ತಯೇ ದಿವಿಷದೋ ।
ನಿತ್ಯಂ ತಪಃ ಕುರ್ವತೇ ।
ಯೇ ನೈವಾಖಿಲ ಲೋಕತಾಪಹರಣೋ ।
ಯೇ ನೈವ ಭೂಯಾತ್ ಸುಖಂ ॥
ಮತ್ವಾ ಭಾವಿಕ ಲೌಕಿಕಾಶ್ಚ ಸತತಂ ।
ಪ್ರತ್ಯಾಗತಾ ಯಂ ಖಲು ।
ತಂ ವಂದೇ ಮಧುಕೇಶ್ವರಂ ।
ನತಜನಾಭೀಷ್ಟಾರ್ಥದಂ ಸಿದ್ಧಿದಂ ॥ ೨ ॥

ಕರ್ತಾ — **ಬ್ರಹ್ಮಶ್ರೀ ಶಿವಗಂಗಾಧರ ಶರ್ಮಾ**





ಮಧುವರ್ಣದ ಮಧುಕೇಶ್ವರ ಲಿಂಗ



ಉತ್ಸವ ಮೂರ್ತಿ



ನೃತ್ಯ ಮಂಟಪ



ಉಮಾಮಹೇಶ್ವರ ಮಂಟಪ

( ಸೋದೆಯ ಸದಾಶಿವರಾಯ ಅರ್ಪಿಸಿದ್ದು )



ಆದಿ ಮಾಧವ



ಸರಸ್ವತಿ



ಶ್ರೀ ( ಲಕ್ಷ್ಮೀ ) ನರಸಿಂಹ
ಸೋದೆಯ ಅರಸಪ್ಪ ನಾಯಕನ ಕುಲದೇವರು

## ಕಲ್ಲು ಮಂಚ



ಸೋದೆಯ ರಘುನಾಥ ನಾಯಕನು ಅರ್ಪಿಸಿದ್ದು



ಭಾರ್ಗವ ಪರಶುರಾಮ



ಚಿ೬: ರಾಣಿ ಶಿವಸ್ಕಂದ ನಾಗಶ್ರೀ ಅರ್ಪಿಸಿದ
ಐದೆಡೆಯ ನಾಗ



ಆದಿ ಮಧುಕೇಶ್ವರ



ಅಲ್ಲಮ ಪ್ರಭುಲಿಂಗ



ಬಸವಲಿಂಗೇಶ್ವರ ಗುಡಿಯ ಭಿತ್ತಿಚಿತ್ರ:
ಮಹಿಷಾಸುರ ಮರ್ದಿನಿ



ಜೈನಬಸದಿಯ ಚಂದ್ರಪ್ರಭ ತೀರ್ಥಂಕರ, ಪದ್ಮಾವತಿ



ಕಾರ್ತಿಕೇಯ

# ಬನವಾಸಿಯ ಊರು


ಹೂವಿನ ಕೊಪ್ಪ
ಮಸೀದಿ
ಸಿರಸಿ
ಪ್ರಧಾನ ಬೀದಿ
ಅಲ್ಲಮಪ್ರಭು
ಪ್ರಭುಲಿಂಗ
ಬನವೇಶ್ವರ
ಮಠ
ಜ್ಯೋತಿ ಮಠ
ಹಿರೇ ಮಠ
ಕಬ್ಬೆಗರ ಓಣಿ
ಬನವನ
ಕಂಚಿ ಹೊಳೆ
ಕಟ್ಟೆ
ಹೊಳೆ
ಒಡಿಯರ ಓಣಿ
ಹೊಳೆಮಠ
ಶ್ರೀ ಮಧುಕೇಶ್ವರ
ಕದಂಬೇಶ್ವರ
ಮೇಲಿನ ಕೇರಿ
ಆದಿ ಮಧುಕೇಶ್ವರ
ಉ

ಪ್ರಕಾಶಕರು :

ಶ್ರೀ ಎಸ್. ಆರ್. ಹೆಗಡೆ, ಕಡವೆ

ಅಧ್ಯಕ್ಷರು,

ಬನವಾಸಿ ಮಧುಕೇಶ್ವರ ಉತ್ಸವಮೂರ್ತಿ ಜೀರ್ಣೋದ್ಧಾರ

ಸಮಿತಿ, ಬನವಾಸಿ ( ಉ. ಕ. )

---

ಮುದ್ರಕರು :

ಉ. ಕ. ಜಿಲ್ಲಾ ಸಹಕಾರಿ ಮುದ್ರಣ ಸಂಘ, ನಿಯಮಿತ

ಕುಮಟಾ